

# ಮಾಯಾಭವನ

ವೀರಗಿರಿ ರಾಜ್ಯದೊಳಗೆ ಎಲ್ಲಿ ನೋಡಿದರೂ ಸಂತೋಷ ಸಂಭ್ರಮ ಕೊಡುವ ದೃಶ್ಯಗಳೇ ! ಕಿವಿಗೆ ಆನಂದ ಪರವಶತೆಯನ್ನೂಡುವ ರಾಗಾಲಾಪನೆಯ ಹಾಡುಗಳೇ. ಕಾಲುಗಳನ್ನು ತಾಳಕ್ಕೆ ಸರಿಯಾಗಿ ಕುಣಿಸುವ ವಾದ್ಯಮೇಳಗಳ ಬಡಿತ ಬಾಜನೆಗಳೇ ! ಎತ್ತ ತಿರುಗಿದರೂ ಆಪ್ಯಾಯತೆಯಿಂದ ತಲೆದೂಗಿಸುವ ಮನರಂಜನೆಗಳೇ !

ಇಷ್ಟೆಲ್ಲಾ ಪ್ರಜಾನೀಕದ ಕೋಲಾಹಲಗಳಿಗೆ ಕಾರಣ ಭವಿಷ್ಯತ್ತಿನ ಯುವರಾಣಿಯಾದ, ಏಕಮಾತ್ರ ಪುತ್ರಿ ರಾಜಕುಮಾರಿ ವಿದ್ಯಾವತಿಯ ಜನ್ಮದಿನೋತ್ಸವ ಸಮೀಪಿಸಿದ್ದೇ.

ಆ ಶುಭ ದಿನಕ್ಕೆ ಒಂದು ವಾರವಷ್ಟೇ ವ್ಯವಧಿ. ಅವಳು ದೇಶಕ್ಕೆ ಯುವರಾಣಿಯಾದುದರಿಂದಲೇ ಪ್ರಜೆಗಳಿಗೆ ಅವಳ ಮೇಲೆ ಪ್ರತ್ಯೇಕವಾಗಿ ಅಷ್ಟು ಗೌರವ–ಪ್ರೇಮ–ಶ್ರದ್ಧೆಗಳು !

ಜನ್ಮ ದಿನಕ್ಕೆ ಮೂರು ದಿನಗಳ ಮೊದಲೇ ಯುವರಾಣಿ ಕುಮಾರಿ ವಿದ್ಯಾವತಿ ಸಹಚರರಾದ ಗೆಳತಿ ಸೇವಿಕೆಯರೊಂದಿಗೆ, ಬಂಧುಮಿತ್ರರೊಂದಿಗೆ ಕೂಡಿ ಆಲಯಕ್ಕೆ ಹೋಗಿ ಶಕ್ತಿ ದೇವಿಯ ದರ್ಶನ ಮಾಡಿಕೊಂಡು ಹಿಂದಿರುಗುವುದು ಜನ್ಮದಿನೋತ್ಸವದ ಮೊದಲನೇ ಮೂರು ದಿನಗಳ ಮುಖ್ಯ ಕಾರ್ಯಕ್ರಮವಾಗಿತ್ತು. ಹಾಗೆ ಹಿಂದಿರುಗುವಾಗ ನಗರದ ಪ್ರಧಾನ ಬೀದಿಗಳ ಮೂಲಕವಾಗಿ ಸಾಗಿ ರಾಜಪ್ರಾಸಾದವನ್ನು ಸೇರುವಳು.

ಆದುದರಿಂದ ಮುಂಜಾನೆ ಸಂಜೆಗಳಲ್ಲಿ ಬೀದಿಗಳನ್ನು ಪರಿಶುಭ್ರ ಮಾಡಿ ಅಲಂಕರಿಸುತ್ತಾರೆ. ಮುತ್ತುಗಳ ರಂಗವಲ್ಲಿ ಚಿತ್ರಗಳಿಂದ, ಪಚ್ಚೆ ತೋರಣ ದ್ವಾರಗಳಿಂದ ಬೀದಿಗಳೆಲ್ಲಾ ಕಳಕಳಿಸತೊಡಗಿದ್ದುವು. ಯುವರಾಣಿಯ ದರ್ಶನ ಭಾಗ್ಯವು, ಯಾವಾಗ ಸಿಗುತ್ತದೋ ಎಂದು ಪ್ರಜೆಗಳು ಆನಂದೋತ್ಸಾಹದಿಂದ ಇದಿರು ನೋಡತೊಡಗಿದರು.

ಆದರೆ ಯುವರಾಣಿಯ ಜನ್ಮದಿನೋತ್ಸವಕ್ಕೆ ಮೂರು ದಿನಗಳ ಮೊದಲನೆಯ ಆ ದಿನ ಬೆಳಗಾಗುವುದಕ್ಕೆ ಮೊದಲು ರಾತ್ರಿಯ ಹೊತ್ತಿನಲ್ಲಿ,



ಮುಖ್ಯ ಪರಿಚಾರಿಕೆ ಶಾಲಿನಿ ಅವಳನ್ನು ಎಬ್ಬಿಸಿ ಕೂಡಿಸಲು ಪ್ರಯತ್ನಪಟ್ಟಳು. ವಿದ್ಯಾವತಿ ಬಹಳ ಕಷ್ಟದಿಂದ ಹೇಗೋ ನಿಂತಳಾದರೂ ಮರುಕ್ಷಣವೇ ಕುಸಿದು ಮಗುಚಿ ಹಾಸಿಗೆಯ ಮೇಲೆ ಬಿದ್ದುಬಿಟ್ಟಳು. ಆಮೇಲೆ ಏಳಲೇ ಇಲ್ಲ. ಮೈ ಅಲುಗಿಸಲಿಕ್ಕೂ ಆಗದೆ ಬಿದ್ದಲ್ಲೇ ಇದ್ದಾಳೆ. ಶಾಲಿನಿಗೆ ಭಯದಿಂದ ಕೈಕಾಲುಗಳು ನಡುಗಿದವು.

ಶಾಲಿನಿಯ ಮೂಲಕ ವಿಷಯ ತಿಳಿದು ತಾಯಿ ವಜ್ರೇಶ್ವರೀದೇವಿ ಮಗಳ ಬಳಿಗೆ ಬೇಗಬೇಗನೇ ಬಂದಳು. ಮುಖ ಪೂರಾ ಬಾಡಿ, ಎಷ್ಟೋ ದಿನಗಳಿಂದ ರೋಗದಲ್ಲಿ ಬಿದ್ದವಳ ಹಾಗೆ ಕಾಣುವ ಮಗಳನ್ನು ನೋಡಿ ತಾಯಿಯ ಎದೆ ತಳಮಳಿಸಿತು. ಕದಲಲಾಗದಂತೆ ಬಿದ್ದಿರುವ ಕುಮಾರಿಯನ್ನು ನೋಡಿ "ಏನಾಯಿತೇ ನನ್ನಂದಾ!..." ಎಂದು ಚೀರಿದಳು. ಅವಳ ಚೀರಿಕೆಯ ಆರ್ತಧ್ವನಿ ಕೇಳಿ ವೀರಸೇನ ರಾಜನೂ ಗಾಬರಿಯಿಂದ ಅಲ್ಲಿಗೆ ಬಂದು ನಿರ್ವಿಣ್ಣನಾಗಿ ನಿಂತನು!

ಆಮೇಲೆ ರಾಜನು ಪ್ರಸ್ತುತಕ್ಕೆ ಬಂದು, ಮಗಳ ಆಕಸ್ಮಿಕ ಶೋಕ ಪರಿಸ್ಥಿತಿಯನ್ನರಿತು, ಬೇಗನೇ ರಾಜವೈದ್ಯನನ್ನು ಕರೆಸಿದನು.

ವೈದ್ಯನು ರಾಜಕುಮಾರಿಯ ನಾಡಿಯನ್ನು ಪರೀಕ್ಷಿಸಿ ನೋಡಿದಾಗ, ಅವಳ ಶರೀರದಲ್ಲಿ ಯಾವ ತರಹ ರೋಗಲಕ್ಷಣವೂ ಕಂಡುಬರಲಿಲ್ಲ. ಆದರೂ ಅವಳು ಏಳಲಾಗದೆ ಬಿದ್ದಿರುವಳೇಕೆ? ಇದರ ಕಾರಣ ಕಂಡುಹಿಡಿಯಲಾಗದೆ ವೈದ್ಯನು, "ಪ್ರಭೂ, ಈಗ ಯುವರಾಣಿಗೆ ಯಾವ ಔಷಧವೂ ಬೇಡ. ಎರಡು ಮೂರು ದಿನ ಪರಿಶೀಲನೆ ನಡೆಸಿ, ಆಮೇಲೆ ಔಷಧ ಚಿಕಿತ್ಸೆ ಪ್ರಾರಂಭಿಸೋಣ. ಅದುವರೆಗೆ ಅವಳಿಗೆ ವಿಶ್ರಾಂತಿಯ ಅಗತ್ಯವಿದೆ. ವಿಶ್ರಾಂತಿಯೇ ಮದ್ದಾಗಲೂ ಬಹುದು" ಎಂದನು. ಸರಿ ಎಂಬಂತೆ ರಾಜನು ತಲೆಯಾಡಿಸಿದನು.

ರಾಜಭಟರು ಸಾರಿದ ಡಂಗುರವನ್ನು ಕೇಳಿ ಎಲ್ಲರೂ ದಿಗ್ಭ್ರಾಂತರಾದರು. ಯುವರಾಣಿ ಇದ್ದಕ್ಕಿದ್ದ ಹಾಗೆ ವ್ಯಾಧಿಗ್ರಸ್ತಳಾಗಿದ್ದಾಳಂತೆ! ಮಹಾರಾಜರು ಜನ್ಮದಿನೋತ್ಸವವನ್ನು ರದ್ದು ಮಾಡಿದ್ದಾರಂತೆ!

ಕೇಳಿದವರ ಎದೆಗೆ ಕಲ್ಲುನುಗ್ಗಿ ಬಿದ್ದ ಹಾಗಾಯಿತು. ಇದರಿಂದ ಪ್ರಜೆಗಳಿಗೆ ಭಾರೀ ದೊಡ್ಡ ಆಶಾ ಭಂಗದ ವೇದನೆಯಾಯಿತು. ಪ್ರಜೆಗಳ ಹಾಗೆಯೇ ವೀರಪುರಿ ರಾಜನಾದ ವೀರಸೇನನೂ, ಮಹಾರಾಣಿ ವಜ್ರೇಶ್ವರೀದೇವಿಯೂ, ಏಕೈಕ ಕುಮಾರಿ ವಿದ್ಯಾವತಿಯ ಆಕಸ್ಮಿಕ ವ್ಯಾಧಿಯಿಂದ ಚಿಂತಾ ಸಮುದ್ರಕ್ಕೆ ಬಿದ್ದರು. ಇದಕ್ಕೆ ಮೊದಲು ಎಂದೂ ಯುವರಾಣಿಗೆ ಸ್ವಲ್ಪ ಕೂಡಾ ಆರೋಗ್ಯ ಕೆಟ್ಟಿರಲಿಲ್ಲ. ಹಾಗಿರುವಾಗ, ಮಲಗುವಾಗ ಕೂಡಾ ಚೆನ್ನಾಗಿದ್ದವಳಿಗೆ, ಫಕ್ಕನೆ ಅಯ್ಯೋಮ್ಮಾ—ಎಂದು ಕೂಗುವ ಹಾಗೇನಾಯಿತು? ಹಾಸಿಗೆಯಿಂದ ಏಳಲಾಗದೆ ಹೊರಳಾಡುತ್ತಿದ್ದಾಳೆ!

ರಾಣಿ ವಜ್ರೇಶ್ವರೀದೇವಿ, ಆ ದಿನವಿಡೀ ಯುವ ರಾಣಿಯ ಪಕ್ಕದಲ್ಲೇ ಕುಳಿತುಕೊಂಡಳು. ವಿದ್ಯಾವತಿಗೆ ಪ್ರಶಾಂತವಾಗಿ ನಿದ್ದೆ ಬಂತು.

ಸಾಯಂಕಾಲ ರಾಜವೈದ್ಯನು ಬಂದಾಗ, ಅವಳು ಕಣ್ಣುಬಿಡಿಸಿ, "ಇನ್ನೂ ಆಯಾಸವಾಗಿದೆ, ನನಗೆ ಹಸಿವೆಯೇ ಇಲ್ಲ" ಎಂದಳು.

ರಾಜವೈದ್ಯನು ಅವಳಿಗೆ ಹಣ್ಣಿನ ರಸ ಮಾತ್ರ ಕೊಡಲು ಹೇಳಿದನು.

ಎರಡನೇ ದಿನ ಕೂಡಾ ಮೊದಲನೇ ದಿನದ ಹಾಗೆಯೇ ಕಳೆಯಿತು. ಆ ದಿನ ರಾತ್ರಿ ರಾಣಿಗೆ ಒಂದು ವಿಚಿತ್ರವಾದ ಅನುಭೂತಿಯುಂಟಾಯಿತು. ಅವಳು ಕಣ್ಣು ಮುಚ್ಚಿಕೊಂಡು ಮಲಗಿದ್ದಾಗ ತಟಕ್ಕನೆ ಜಿಲ್ಲೆಂಬ ಹಾಗೆ ತಣ್ಣಗಿನ ಸ್ಪರ್ಶ ದೇಹಕ್ಕೆ ತಗಲಿತು. ಕಣ್ಣು ತೆರೆದು ನೋಡಿದಾಗ ಬೆಳ್ಳಗೆ ದೆವ್ವದಂಥ ಆಕಾರವು ಕೋಣೆಯಿಂದ ಹೊರಗೆ ಹೋಗುವುದು ಅವಲೀಲೆಯಾಗಿ ಕಾಣಿಸಿತು. ಆದರೂ ಅದರ ಮುಖವು ಸ್ಪಷ್ಟವಾಗಿ ಕಾಣಲಿಲ್ಲ. ಅದು ಗಂಡೋ ಹೆಣ್ಣೋ ಎಂಬುದೂ ಗೊತ್ತಾಗಲಿಲ್ಲ. ಒಂದುವೇಳೆ ಕಿಟಿಕಿಯಿಂದ ತೂರಿಹೋದ ಬೆಳುದಿಂಗಳ ಕಿರಣಗಳನ್ನು ನೋಡಿ ತಾನು ದೆವ್ವವಾಗಿ ಭ್ರಮೆಪಟ್ಟೆನೋ ಎಂದುಕೊಂಡು ರಾಣಿ ಮಲಗಿ ಕಣ್ಣು ಮುಚ್ಚಿಕೊಂಡಳು.

ಸ್ವಲ್ಪ ಹೊತ್ತಾದ ಮೇಲೆ ಮತ್ತೆ ಅದೇ ಬಗೆಯ ಸ್ಪರ್ಶವಾಗಿ, ರಾಣಿ ಮೆಟ್ಟಿಬಿದ್ದೆದ್ದು ನೋಡಿದಳು. ದೆವ್ವವೂ ಇಲ್ಲ, ಬೆಳುದಿಂಗಳ ಕಿರಣಗಳೂ ಇಲ್ಲ.

ರಾಣಿ ಆಚೇ ಬದಿಯಲ್ಲೇ ನಿದ್ದೆಯಲ್ಲಿದ್ದ ರಾಜನನ್ನೂ ಎಬ್ಬಿಸಿ ತನಗಾದ ಅನುಭೂತಿಯನ್ನು ಹೇಳಿದಳು.

ಅದನ್ನೆಲ್ಲಾ ಕೇಳಿ ರಾಜನು, "ದೇವೀ, ವಿದ್ಯಾವತಿಯ ಪರಿಸ್ಥಿತಿಯನ್ನೇ ಆಲೋಚಿಸಿಕೊಳ್ಳುತ್ತ ಹೆದರಿಕೊಂಡೇ ಮಲಗಿರುತ್ತೀ. ಜೋಂಪಿನಲ್ಲೇ



ಏನೋ ಕನಸು ಬಿದ್ದಿದೆ. ಅಷ್ಟೇ ! ಕುಲದೇವರನ್ನು ನಂಬಿ ಚಿಂತೆ ಬಿಡು. ನಮ್ಮ ಮಗಳಿಗೆ ಏನೂ ಆಗದು." ಎಂದು ರಾಣಿಯನ್ನು ಸಮಾಧಾನದಿಂದಿರುವಂತೆ ಹೇಳಿದನು.

ಮೂರನೇ ದಿನ ಬೆಳಗಾದ ಕೂಡಲೇ ರಾಜವೈದ್ಯನು ಬಂದನು. ವಿದ್ಯಾವತಿಯ ಆರೋಗ್ಯದಲ್ಲಿ ಯಾವ ವ್ಯತ್ಯಾಸವೂ ಕಾಣಲಿಲ್ಲ. ಅವಳನ್ನು ರಾಜವೈದ್ಯನು ಪರಿಶೀಲಿಸಿ ನೋಡಿ, ಬಲವರ್ಧಕವಾದ ಔಷಧಗಳನ್ನು ಮೂರು ಹೊತ್ತು ಸೇವಿಸಲಿಕ್ಕಾಗಿ ಕೊಟ್ಟು ಹೋದನು.

ಆ ದಿನ ಸಾಯಂಕಾಲ ರಾಜನು ಯುವರಾಣಿಯ ಅನಾರೋಗ್ಯವು ಗುಣವಾಗದ್ದರಿಂದ ಜನ್ಮದಿನೋತ್ಸವವನ್ನು ಪೂರ್ತಿ ರದ್ದುಮಾಡಿರುವುದಾಗಿ ಡಂಗುರ ಹಾಕಿಸಿದನು. ಆದುವರೆಗೆ ಹದಿನಾರು ವರ್ಷಗಳಿಂದ ಹೀಗೆಂದೂ ಆಗಿರಲಿಲ್ಲ. ಪ್ರತಿ ವರ್ಷ ಯುವರಾಣಿ ದೇವಾಲಯಕ್ಕೆ ಹೋಗುವಾಗ ರಾಜಬೀದಿಯಲ್ಲಿ



ಜನರು ಎರಡು ಬದಿಗಳಲ್ಲಿಯೂ ಸಾಲಾಗಿ ನಿಂತು ಕೊಂಡು ಆನಂದೋತ್ಸಾಹದಿಂದ ಅವಳಿಗೆ ಶುಭಾಕಾಂಕ್ಷೆಗಳ ಘೋಷಣ ಮಾಡುತ್ತಿದ್ದರು.

ಈ ವರ್ಷ ಅದಾವುದಕ್ಕೂ ಅವಕಾಶವಿಲ್ಲದಾಗುತ್ತಲೇ ತಮ್ಮ ಯುವರಾಣಿಗೆ ಏನಾಯಿತೋ ಎಂದು ಭಯದಿಂದ ಚಡಪಡಿಸಿಕೊಂಡಿದ್ದರು. ರಾಜಬೀದಿಯಲ್ಲಿ ಅಲ್ಲಲ್ಲಿ ಗುಂಪು ಗುಂಪಾಗಿ ಸೇರಿ ತಮ್ಮೊಳಗೆ ತಾವು ಏನೇನೋ ಊಹಿಸಿಕೊಂಡು ಚರ್ಚಿಸಿಕೊಂಡಿದ್ದರು. ಕೆಲವರು ರಾಜಪ್ರಾಸಾದದ ಮುಂದೆಯೂ ಗುಂಪುಗೂಡಿ, ಒಳಗಿನಿಂದ ಏನು ಸುದ್ದಿ ಬರುವುದೋ ಎಂದು ತಿಳಿಯಲು ಕಾದಿದ್ದರು. ಒಳಗಿನಿಂದ ಬರುವ ಸೇವಕರೂ ಕೂಡಿದವರ ಭಯ ಹೆಚ್ಚುವಂತೆ ಮಾತಾಡಬೇಡಿರೆಂದಷ್ಟೇ ಹೇಳುತ್ತಿದ್ದರು.

ಮುಂಚಿನ ದಿನ ಒಬ್ಬ ರಾಜಭಟನು ಅರಮನೆಯೊಳಗಿಂದ ಹೊರಗೆ ಬಂದು, ಅಲ್ಲಿ ಗುಂಪಾಗಿರುವವರನ್ನು ನೋಡಿ, "ಸದ್ಯಕ್ಕೆ ಯುವರಾಣಿಯ ಆರೋಗ್ಯ ಸ್ವಲ್ಪ ಪರವಾಗಿಲ್ಲ ಅನ್ನಬಹುದು. ಮೆಲ್ಲನೆ ಎದ್ದು ಕುಳಿತುಕೊಳ್ಳುತ್ತಾಳೆ. ನಾಳೆ ಯುವರಾಣಿಯ ಜನ್ಮದಿನೋತ್ಸವದ ಸಂದರ್ಭದಲ್ಲಿ ಎಲ್ಲಾ ದೇವಾಲಯಗಳಲ್ಲಿಯೂ ಪ್ರತ್ಯೇಕ ಪೂಜೆ ನಡೆಸಬೇಕೆಂದು ಮಹಾರಾಜರು ಆಜ್ಞಾಪಿಸಿದ್ದಾರೆ. ಪ್ರಧಾನ ಜ್ಯೋತಿಷಾಚಾರ್ಯರಾದ, ವಾಚಸ್ಪತಿಯವರ ಹತ್ತಿರ ಮಾತಾಡಲು ಮಹಾರಾಜರೇ ಸ್ವತಃ ಹೋಗಿದ್ದಾರೆ. ನೀವೆಲ್ಲಾ ನಿಮ್ಮ ನಿಮ್ಮ ಮನೆಗಳಿಗೆ ಹೋಗಿ ನಿಮ್ಮ ಇಷ್ಟದೈವವನ್ನು ಯುವರಾಣಿಗೆ ಒಳ್ಳೇದಾಗುವಂತೆ ಪ್ರಾರ್ಥಿಸುವುದು ಒಳ್ಳೇದು. ಇಲ್ಲಿ ಗುಂಪುಗೂಡಬೇಡಿ" ಎಂದು ಹೇಳಿದನು.

ಆ ವಾರ್ತೆ ಕೇಳಿ ಊರ ಜನರು ಸ್ವಲ್ಪಮಟ್ಟಿಗೆ ಸಮಾಧಾನಪಟ್ಟು, ಯುವರಾಣಿಗೆ ಅನಾರೋಗ್ಯದಿಂದ ಪೂರ್ಣ ಗುಣಮುಖಳಾಗಬೇಕೆಂದು, ಅವಳ ಆಯುರಾರೋಗ್ಯಗಳು ನೂರ ಹದಿನಾರು ವರ್ಷಗಳವರೆಗೂ ವರ್ಧಿಸಿಕೊಂಡಿರಬೇಕೆಂದು ಪ್ರಾರ್ಥಿಸಿಕೊಳ್ಳಲು ತೊಡಗಿದರು. ಪ್ರತಿ ಮನೆಗಳಲ್ಲಿಯೂ, ಗುಡಿಗಳಲ್ಲಿಯೂ ಪೂಜೆಗಳೂ ಪ್ರಾರ್ಥನೆಗಳೂ ನಡೆಯತೊಡಗಿದುವು.

ಪ್ರಧಾನ ಜ್ಯೋತಿಷಾಚಾರ್ಯ ವಾಚಸ್ಪತಿ, ರಾಜನೊಂದಿಗೆ ರಾಜಭವನಕ್ಕೆ ಬಂದು, ಯುವರಾಣಿಯ ಜಾತಕವನ್ನು ಸ್ವಲ್ಪ ಹೊತ್ತು ನಿಶಿತವಾಗಿ ನೋಡಿ, ಗಣಿಸಿ, ಗುಣಿಸಿ, "ಮಹಾರಾಜರೇ. ಯುವರಾಣಿ ಹುಟ್ಟಿದ ಸಮಯದಲ್ಲೇ ಅವಳ ಜಾತಕವನ್ನು ಪರೀಕ್ಷಿಸಿ, ಹದಿನಾರನೇ ವರ್ಷದಲ್ಲಿ ಒಂದು ಗಂಡವಿರುವುದೆಂದು ಹೇಳಿದ್ದೇನೆಂದು ಇದರಲ್ಲಿ ಗುರುತಿಸಿದ್ದೇನೆ, ಮರೆತಿರಾ?" ಎಂದನು.

"ಹೌದು, ನಮಗೆ ಅದರ ನೆನಪೇ ಬಾರದೆ ಹೋಯಿತು. ಶಿಶುಪ್ರಾಯದಿಂದಲೇ ಇವಳು ಯಾವ ಅನಾರೋಗ್ಯಕ್ಕೂ ಗುರಿಯಾಗಲಿಲ್ಲ. ಆದ್ದರಿಂದಲೇ ನಮಗೆ ಯಾವ ಅನುಮಾನವೂ



ಬರಲಿಲ್ಲ. ಈಗ ಕೂಡಾ ಅವಳನ್ನು ಪರೀಕ್ಷಿಸಿದ ರಾಜವೈದ್ಯರು ಅವಳ ಶರೀರದಲ್ಲಿ ಯಾವ ವ್ಯಾಧಿಯ ಲಕ್ಷಣವೂ ಇಲ್ಲವೆಂತಲೇ ಹೇಳಿದ್ದಾರೆ. ಹಾಗಿರುವಾಗ ಹೀಗೇಕೆ ಥಕ್ಕನೆ ಶಕ್ತಿಯನ್ನೆಲ್ಲಾ ಕಳೆದುಕೊಂಡಳೋ ? ಜಾತಕದ ಗಂಡಕ್ಕೂ ಇದಕ್ಕೂ ಏನು ಸಂಬಂಧವೋ ? ಗ್ರಹಶಾಂತಿ ಮಾಡಬೇಕೆನ್ನುವಿರಾ ಸ್ವಾಮಿ ? " ಎಂದನು ರಾಜ ಚಿಂತೆಯಿಂದ.

ಪಕ್ಕದಲ್ಲಿದ್ದ ರಾಣಿ ವಜ್ರೇಶ್ವರೀದೇವಿ, " ಈ ದಿನ ವಿದ್ಯಾವತಿ ಹುಟ್ಟಿದ ದಿನ. ಪ್ರತಿವರ್ಷವೂ ಅವಳ ಹುಟ್ಟಿದ ದಿನವನ್ನು ವೈಭವದಿಂದ ನಡೆಸುವುದು ಕ್ರಮವಾಗಿತ್ತು. ಇದು ದೇಶದ ಪ್ರಜೆಗಳಿಗೆ ಕೂಡಾ ಸಂತೋಷ ಕೊಡುವ ಹಬ್ಬ. ಈಗ ನಿಮ್ಮ ಅಭಿಪ್ರಾಯವೇನು ಆಚಾರ್ಯರೇ ? ವಿದ್ಯಾವತಿ ಸಂಪೂರ್ಣ ಆರೋಗ್ಯಶಾಲಿನಿಯಾಗಿ ಮಾಮೂಲು ರೀತಿಗೆ ಬರುತ್ತಾಳೋ ? ಏನಾದರೂ ದೋಷ ಇದೆಯೆ ? ಶಾಂತಿ ಮಾಡಿಸಬೇಕೆ ? ಹೇಳಿರಿ ಆಚಾರ್ಯರೇ ! ನಿಮ್ಮ ಆಲೋಚನೆ ನನಗೇನೇನೋ ಅನಿಸುತ್ತದೆ ! " ಎಂದಳು ಚಿಂತಾತುರತೆಯಲ್ಲಿ.

ವಾಚಸ್ಪತ್ಯಾಚಾರ್ಯನು ಮತ್ತಷ್ಟು ದೀಕ್ಷೆವಹಿಸಿ, ವಿದ್ಯಾವತಿಯ ಜಾತಕ ಚಕ್ರವನ್ನು ಪರೀಕ್ಷಿಸತೊಡಗಿದನು. ಆಮೇಲೆ ಸ್ವಲ್ಪ ಹೊತ್ತು ಮೌನವಾಗಿದ್ದು, ಅನಂತರ ತಲೆಯೆತ್ತಿ, " ಯುವರಾಣಿಯ ಜಾತಕದ ಗ್ರಹ ಸಂಚಾರಗಳು, ಈಗ ಒಂದು ವರ್ಷದಿಂದ ಶುಭಪ್ರದವಾಗಿ ಕಾಣುವುದಿಲ್ಲ. ಕೆಲವು ಗ್ರಹಗಳ ಉಗ್ರದೃಷ್ಟಿ ಈ ಜಾತಕದವಳ ಮೇಲೆ ಬಿದ್ದಿದೆ. ಆದ್ದರಿಂದಲೇ ಈಗ ಪರಿಸ್ಥಿತಿ ಹೀಗಾಗಿದೆ. ಹೀಗೆಯೇ ಇದ್ದರೆ ಮುಂದೇನಾಗುವುದೋ ? ಸರಿಯಾಗಿ ಹೇಳಬೇಕಾದರೆ, ಗ್ರಹ ಸಂಚಾರಗಳು ಶುಭಪ್ರದಕ್ಕೆ ತಿರುಗಬೇಕಾದರೆ ಹನ್ನೊಂದು ತಿಂಗಳು, ಹನ್ನೊಂದು ದಿನಗಳವರೆಗೆ ಅವಧಿ ಬೇಕು. ಅಷ್ಟರವರೆಗೆ ಅವಳನ್ನು ಕಣ್ಣಿನ ರೆಪ್ಪೆಯ ಹಾಗೆ ಜಾಗರೂಕತೆಯಿಂದ ಕಾಪಾಡಬೇಕು. ಈಗ ಮೊದಲು ಅವಳ ನಿವಾಸವನ್ನು ಈ ಭವನದಿಂದ ಬೇರೊಂದು ಭದ್ರವಾದ ಭವನಕ್ಕೆ ಬದಲಾಯಿಸಿ ಬಿಡುವುದು ಒಳ್ಳೇದು. ಅತ್ಯಗತ್ಯ ಕೂಡಾ " ಎಂದನು.

ರಾಣಿಗೆ ಕಣ್ಣೀರು ತುಂಬಿ, " ಈ ಸ್ಥಿತಿಯಲ್ಲಿ ಇವಳನ್ನು ಎಲ್ಲಿಗೆ ತಾನೇ ಕಳುಹಿಸುವುದು ಆಚಾರ್ಯರೇ ? ಪ್ರತಿ ವರ್ಷ ಇವಳ ಜಾತಕ ಪರೀಕ್ಷಿಸಿ ನೋಡಬೇಕಿತ್ತೋ ಏನೋ ? " ಎಂದಳು ಗದ್ಗದಿತಳಾಗಿ.

ಜ್ಯೋತಿಷಾಚಾರ್ಯನಿಂದ ಯಾವ ಉತ್ತರವನ್ನೂ ಕೊಡಲಾಗಲಿಲ್ಲ.

ಸ್ವಲ್ಪ ಹೊತ್ತಿನ ಮೇಲೆ ರಾಜನೇ ಮೌನವನ್ನು ಮುರಿದು, " ರಾಜಧಾನೀ ನಗರದಲ್ಲಿರುವ ಸಾರಸ ಸರೋವರದ ಮಧ್ಯದಲ್ಲಿರುವ ದ್ವೀಪದಲ್ಲಿ ಬೇಸಗೆಯ ಬಿಡದಿಗಾಗಿ ನಿರ್ಮಿಸಿದ ವಿಶ್ರಾಂತಿ ಭವನವಿದೆ. ಕುಮಾರಿಯನ್ನು ಅಲ್ಲಿಗೆ ಸಾಗಿಸುವುದು ಒಳ್ಳೆಯ



ದೆಂದು ನನಗೆ ಕಾಣುತ್ತದೆ. ಅದೇನೂ ಇಲ್ಲಿಗೆ ಹೆಚ್ಚು ದೂರದಲ್ಲಿಲ್ಲ. ಭದ್ರತೆಗೂ ಸರಿಯಾಗಿದೆ. ನಾವು ದಿನಾ ಹೋಗಿಬರಲು ಅನುಕೂಲವಾಗಿ ಸಮೀಪವಾಗಿಯೇ ಇರುತ್ತೆ. ಅವಳಿಗೆ ಬೇಕಾದ್ದನ್ನೆಲ್ಲಾ ಅಲ್ಲಿಯೇ ಏರ್ಪಡಿಸಿಬಿಡೋಣ" ಎಂದನು.

"ಆ ಸಾರಸ ಸರೋವರವು ಇಲ್ಲಿಗೆ ಆಗ್ನೇಯ ದಿಕ್ಕಿನಲ್ಲಿ ತಾನೇ ಇದೆ?" ಎಂದು ಕೇಳಿದನು ಜ್ಯೋತಿಷಾಚಾರ್ಯ.

ಹೌದೆಂದನು ರಾಜ. "ಹಾಗಿದ್ದರೆ ಯುವರಾಣಿಯನ್ನು ಅಲ್ಲಿರಿಸುವುದು ಎಲ್ಲಾ ವಿಧದಲ್ಲಿಯೂ ಕ್ಷೇಮವೇ ನಿಜ. ಇನ್ನೊಂದು ಮುಖ್ಯ ವಿಷಯವೇನೆಂದರೆ, ಯುವರಾಣಿ ಅಲ್ಲಿ ಏಕಾಂತದಲ್ಲೇ ಕಾಲ ಕಳೆಯಬೇಕು. ತಂದೆ ತಾಯಿಗಳ ದೃಷ್ಟಿ ಕೂಡಾ ಅವಳ ಮೇಲೆ ಬೀಳಬಾರದು. ಇಷ್ಟು ವರ್ಷಗಳ ವರೆಗೆ ಪ್ರಜೆಗಳ ಆನಂದದ ದೃಷ್ಟಿ ತಗಲಿಯೇ ಆದರ ಜ್ವಾಲೆ ಫಕ್ಕನೆ ಭುಗಿಲೆದ್ದು ಬೀಳಿಸಿ ಹಾಕಿರಬೇಕು. ಈಗ ಅವಳೊಂದಿಗೆ ಒಬ್ಬಳು ಪರಿಚಾರಿಕೆ ಮಾತ್ರ ಜತೆಯಾಗಿದ್ದರೆ ಸಾಕು. ಅವರಿಬ್ಬರಿಗೆ ಆಹಾರ ಪಾನೀಯಗಳನ್ನು ರಾಜಭವನದಿಂದಲೇ ಕಳುಹಿಸಬಹುದು. ತಿಂಗಳಿಗೊಂದುಸಾರಿ ನೀವು ಹೋಗಿ ಮಗಳನ್ನು ನೋಡಿಬನ್ನಿರಿ. ನಿಮ್ಮ ಮಗಳ ಕ್ಷೇಮಕ್ಕಾಗಿ ಇದು ನೀವು ಮಾಡುವ ತಪಸ್ಸಿನ ಹಾಗೆ ಭಾವಿಸಿಕೊಳ್ಳಿರಿ. ಇವೆಲ್ಲಾ ಎಂದೆಂದಿಗೂ ಅಲ್ಲ; ತಾತ್ಕಾಲಿಕವಾಗಿಯೇ ಅಂದುಕೊಳ್ಳಿರಿ. ಗ್ರಹದೋಷ ತೊಲಗಿಹೋದ ಕೂಡಲೇ ಮಗಳು ಎಂದಿನಂತಾಗುತ್ತಾಳೆ. ಆಗಲೇ ಅವಳಿಗೆ ಮದುವೆಯ ಯೋಗ ಕೂಡಾ ಬರುತ್ತದೆ. ಆದರೆ ನಿಮಗೆ ಯಾವ ಚಿಂತೆಯೂ ಬೇಕಾಗಿಲ್ಲ. ಭಗವಂತನ ಮೇಲೆ ಭಾರ ಹಾಕಿ, ನಿಶ್ಚಿಂತರಾಗಿರಿ. ನಾನು ಇಲ್ಲಿಗೆ ಹೊರಡುವಾಗ ಮನೆಯ ಹತ್ತಿರ ಜಗತ್ಸತ್ಯಾಚಾರ್ಯರು ಬಂದಿದ್ದರು. ಈ ವಿಷಯವನ್ನು ಅವರೊಂದಿಗೆ ಪ್ರಸ್ತಾಪಿಸಿ, ನೀವು ಯುವರಾಣಿಯನ್ನು ನೋಡಲಿಕ್ಕೆ ತಕ್ಕ ಶುಭ ಸಮಯ ಯಾವುದೆಂದು ತಿಳಿದು ಹೇಳುತ್ತೇನೆ" ಎಂದು ಅಲ್ಲಿಂದ ಹೊರಗೆ ಹೊರಟನು.

ಕೂಡಲೇ ಅವನು ಹೇಳಿದಂತೆ ನಡೆಯಬೇಕಾದ ಕಾರ್ಯಗಳೆಲ್ಲಾ ಲಗುಬಗನೆ ನಡೆದುವು. ವಿಶ್ರಾಂತಿ ಭವನವನ್ನು ಯುವರಾಣಿಗೆ ತಕ್ಕಂತೆ ಸಿದ್ಧಪಡಿಸಲು ರಾಜನು ಭಟರನ್ನು ಕಳುಹಿಸಿದನು. ವಿದ್ಯಾವತಿ ಹುಟ್ಟಿದಂದಿನಿಂದ ಅವಳ ಅಗತ್ಯಗಳನ್ನೆಲ್ಲಾ ನೋಡಿಕೊಳ್ಳುತ್ತಿದ್ದ ರಾಣಿಯ ವೃದ್ಧ ಪರಿಚಾರಿಕೆ ಕಮಲೆಯನ್ನು ಯುವರಾಣಿಯೊಂದಿಗೆ ಕಳುಹಿಸಬೇಕೆಂದು ರಾಣಿ ನಿರ್ಣಯಿಸಿಕೊಂಡಳು. ಯುವರಾಣಿಗೂ, ಆ ಪರಿಚಾರಿಕೆಗೂ ಬೇಕಾದ ಆಹಾರ ಪಾನೀಯಗಳನ್ನು ರಾಜಪ್ರಾಸಾದದಿಂದ ಆರು ಮಂದಿ ಸೇವಿಕೆಯರು ದಿನಕ್ಕೆ ಇಬ್ಬರ ಹಾಗೆ ತೆಗೆದುಕೊಂಡು ಹೋಗಲು ಏರ್ಪಡಿಸಲ್ಪಟ್ಟಿತು. ಕಮಲೆ ಯುವರಾಣಿಯ ಹತ್ತಿರವೇ ಇರುವವಳು.

ಜ್ಯೋತಿಷಾಚಾರ್ಯನ ಸಲಹೆಯ ಪ್ರಕಾರ, ಸರಿಯಾಗಿ ಅರ್ಧರಾತ್ರಿಯ ಸಮಯದಲ್ಲಿ ಯುವ ರಾಣಿ ರಾಜಪ್ರಾಸಾದದಿಂದ ಮೇನಾದಲ್ಲಿ ಹೊರಟಳು. ರಾಜನೂ ರಾಣಿಯೂ ರಾಜಪ್ರಾಸಾದದ ಸಿಂಹದ್ವಾರದವರೆಗೆ ಬಂದು ಸಾಗ ಕಳುಹಿಸಿದರು. ವೃದ್ಧ ಪರಿಚಾರಿಕೆ ಕಮಲೆಯೊಂದಿಗೆ ಮತ್ತಿಬ್ಬರು ಸಹಚರಿಯರು ಕೂಡಾ ಸಾರಸ ಸರೋವರದವರೆಗೆ ಹೋಗಿ, ಯುವರಾಣಿ ವಿದ್ಯಾವತಿಯನ್ನು ಅಲ್ಲಿ ಇಳಿಸಿ ಹಿಂದಿರುಗಿ ಬಂದರು.

ಅಲ್ಲಿಂದ ದೋಣಿಯವನು ಯುವರಾಣಿಯನ್ನೂ ಪರಿಚಾರಿಕೆಯಾದ ಕಮಲೆಯನ್ನೂ ದೋಣಿಯಲ್ಲಿ ಕುಳ್ಳಿರಿಸಿಕೊಂಡು ಸರೋವರದ ಮಧ್ಯದಲ್ಲಿರುವ ದ್ವೀಪದಲ್ಲಿಳಿಸಿ, ವಿಶ್ರಾಂತಿ ಭವನದ ಮೆಟ್ಟಿಲಿನ ಹತ್ತಿರದವರೆಗೆ ಹೋಗಿ ಸ್ವಲ್ಪ ಹೊತ್ತಿಗೆ ಹಿಂದಿರುಗಿ ಬಂದು ತೀರದಲ್ಲಿ ನಿಂತಿದ್ದ ಪರಿಚಾರಿಕೆಯರಿಗೆ ಆ ಸಂಗತಿಯನ್ನು ತಿಳಿಸಿದನು.

ತಮ್ಮ ಕುಮಾರಿಯನ್ನು ಹೀಗೆ ಹಠಾತ್ತಾಗಿ ತಮ್ಮಿಂದ ದೂರ ಮಾಡಿಸಿದ ವಿಧಿಯ ವೈಪರೀತ್ಯ ನೆನೆದುಕೊಂಡು ರಾಜದಂಪತಿಗಳು ತೀರದ ಚಿಂತೆಗೆ ಒಳಗಾದರು. ಒಬ್ಬರನ್ನೊಬ್ಬರು ಸಮಾಧಾನಪಡಿಸಿಕೊಳ್ಳುತ್ತ, ಕುಮಾರಿಯನ್ನು ನೋಡಲು ತಕ್ಕ ಶುಭ ಘಳಿಗೆ ತಿಳಿಯಪಡಿಸಲು ಜ್ಯೋತಿಷಾಚಾರ್ಯನು ಯಾವಾಗ ಬರುತ್ತಾನೋ ಎಂದು ಅವನ ಬರುವಿಕೆಯನ್ನೇ ನಿರೀಕ್ಷಿಸುತ್ತ ಕಾದುಕೊಂಡಿದ್ದರು.

ಯುವರಾಣಿಗೆ ಬಂದು ಮುಸುಗಿದ ಈ ದುರ್ಗತಿಯನ್ನು ದೇಶದ ಪ್ರಜೆಗಳಿಗೆ ತಿಳಿಯಪಡಿಸಲು ರಾಜನು ದೇಶದ ನಾಲ್ಕು ಮೂಲೆಗಳಿಗೂ ಭಟರನ್ನು ಕಳುಹಿಸಿದನು. ಬರುವ ವರ್ಷ ಯುವರಾಣಿಯ ಜನ್ಮದಿನೋತ್ಸವವನ್ನು ಇನ್ನಷ್ಟು ಘನ ರೀತಿಯಲ್ಲಿ ಏರ್ಪಡಿಸಲಾಗುತ್ತದೆಂದೂ, ಚಿಂತಿಸುತ್ತಾ ದಿಗಿಲು ಬೀಳುವುದನ್ನು ಬಿಟ್ಟು, ಎಂದಿನಂತೆ ತಮ್ಮ ಕರ್ತವ್ಯಗಳನ್ನು ಮಾಡಿಕೊಂಡಿರಬೇಕೆಂದೂ ಅದುವರೆಗೆ ಸಹನೆಯಿಂದಿರಬೇಕೆಂದೂ ರಾಜನು ಪ್ರಜೆಗಳಿಗೆ ಸಮಾಧಾನವಾಗುವಂತೆ ಡಂಗುರ ಸಾರಿಸಿದನು.

ಆ ಬಗೆಯ ಡಂಗುರ ಮಾತುಗಳನ್ನು ಕೇಳಿ ಪ್ರಜೆಗಳಿಗೆ ಬಹಳಮಟ್ಟಿಗೆ ಸಮಾಧಾನವಾಯಿತು. ಕೆಲವು ದಿನಗಳವರೆಗೆ ದೇಶದೊಳಗೆಲ್ಲಾ ವಿಚಿತ್ರವಾದೊಂದು ಪ್ರಶಾಂತತೆ ನೆಲೆಸಿತು. ಅದು ಭಗ್ನಬಾಗಿ ಸಿಡಿಯಲು ಹೆಚ್ಚು ಕಾಲ ಹಿಡಿಯಲಿಲ್ಲ.

ಒಂದು ದಿನ ಸಾರಸ ಸರೋವರ ದ್ವೀಪದ ವಿಶ್ರಾಂತಿ ಭವನದಲ್ಲಿ ವಿದ್ಯಾವತೀ ಯುವರಾಣಿ ಮಾಯವಾಗಿರುವಳೆಂಬ ಸುದ್ದಿ ಎದ್ದಿತು. ಅದನ್ನು ಕೇಳಿ ದೇಶದ ಜನತೆಗೆಲ್ಲಾ ದಿಗ್ಭ್ರಾಂತಿಯಿಂದ ತಲೆಗಳು ಸುತ್ತಿದುವು!

—(ಇನ್ನೂ ಇದೆ)





# ಮಾಯಾ ಭವನ

## ೨

[ ವೀರಗಿರಿಯ ಯುವರಾಣಿ ವಿದ್ಯಾವತಿಯ ಜನ್ಮದಿನೋತ್ಸವಕ್ಕೆ ಮೂರು ದಿನಗಳಿಗೆ ಮೊದಲೇ ಯುವರಾಣಿಗೆ ಏನೆಂದು ತಿಳಿಯದ ರೋಗದಿಂದ ಏಳಲಾಗದಂತಾದಳು. ಜ್ಯೋತಿಷಾಚಾರ್ಯರ ಆಲೋಚನೆಯಂತೆ ಅವಳನ್ನು ಸರೋವರದ ನಡುವಿನ ವಿಶ್ರಾಂತಿ ಭವನಕ್ಕೆ ಕಳುಹಿಸಿದರು. ಅಲ್ಲಿ ಕ್ಷೇಮವಾಗಿದ್ದ ಅವಳು ಫಕ್ಕನೆ ಕಾಣದೆ ಹೋದಳು. ಅದುವರೆಗೆ ದಿನದಿನಾಭಿವೃದ್ಧಿ ಪಡೆಯುತ್ತಿದ್ದವಳಿಗೆ —ಅದುವರೆಗೆ ]

ಸುಕ್ಷೇಮವಾಗಿದ್ದ ರಾಜಕುಮಾರಿ, ಜ್ಯೋತಿಷಾಚಾರ್ಯ ಪ್ರವರರಿಬ್ಬರು ಹೇಳಿದಂತೆಯೇ ದಿನೇ ದಿನೇ ಆರೋಗ್ಯ ಸುಧಾರಿಸಿಕೊಂಡು ಬರುತ್ತಿರುವಳು. ಫಕ್ಕನೆ ಮಾಯವಾಗುವ ಮೊದಲು ಹನ್ನೊಂದು ತಿಂಗಳು ಶುಭಕರವಾಗಿಯೇ ಸಾಗಿತ್ತು. ಮೊದಲೇನೋ ಒಂದು ತಿಂಗಳವರೆಗೆ ತಾಯಿ ತಂದೆಯರು ಅವಳನ್ನು ನೋಡಬಾರದೆಂದು ಜ್ಯೋತಿಷಾಚಾರ್ಯನು ಹೇಳಿದ್ದನು. ಆಮೇಲೆ ಅವನ ಮಿತ್ರ ಜಗತ್ಪತಾಚಾರ್ಯನ ಅಭಿಪ್ರಾಯದಂತೆ ಮೂರು ಮೂರು ತಿಂಗಳಿಗೊಮ್ಮೆ ಜ್ಯೋತಿಷಾಚಾರ್ಯನು ಹೇಳುವ ಸಮಯದಲ್ಲಿ ಹೋಗಬಹುದೆಂದಾಯಿತು. ಹಾಗೆ ಮೊದಲನೇ ದಿನವಂತೂ ರಾಜ ರಾಣಿಯರು ಆದೇಶಿಸಿದಂತೆ ಸಾರಸ ಸರೋವರದವರೆಗೆ ಹೋಗಿ ಯುವರಾಣಿಯನ್ನು ಅಲ್ಲಿ ಇಳಿಸಿ ಬಂದ ಶಾಲಿನೀ, ಮಾಲಿನಿಯರೆಂಬ ಪರಿಚಾರಿಕೆಯರೇ ಕುಮಾರಿ ವಿದ್ಯಾವತಿಯನ್ನು ದ್ವೀಪಭವನದಲ್ಲಿ ಇಳಿಸಿ ಹಿಂದಿರುಗಿ ಬಂದಿದ್ದರು.

ಮರುದಿನ ಬೆಳಗಾದ ಕೂಡಲೇ ಶಾಲಿನಿ ಮಾಲಿನಿಯರೇ ಯುವರಾಣಿ ವಿದ್ಯಾವತಿಗೆ ಬೇಕಾದ ಊಟ, ಉಪಾಹಾರ, ಪಾನೀಯಗಳನ್ನು ತೆಗೆದುಕೊಂಡು ಬಿಡದಿಯ ಭವನಕ್ಕೆ ಹೊರಟರು. ದೋಣಿ



ಯವನು ಅವರನ್ನು ಬಿಡದಿ ಭವನದ ಮೆಟ್ಟಲಿನ ವರೆಗೆ ಕರೆದೊಯ್ದು ಅಲ್ಲಿ ಇಳಿಸಿದನು. ಯುವರಾಣಿ ಆ ರಾತ್ರಿಯಲ್ಲಿ ಪ್ರಶಾಂತವಾಗಿ ನಿದ್ದೆ ಮಾಡಿಕೊಂಡಿದ್ದುದರಿಂದ ಪರಿಚಾರಿಕೆಯರಿಗೆ ಬಹಳ ಸಂತೋಷವಾಯಿತು. ಅಲ್ಲೇ ಇರುವ ವೃದ್ಧ ದಾಸಿ ಕಮಲೆ, ಯುವರಾಣಿ ನಿನ್ನೆಗಿಂತ ಚೆನ್ನಾಗಿದ್ದಾಳೆಂದಳು. ಅವಳು ಆರೋಗ್ಯವಾಗಿದ್ದುದರಿಂದ ತಾನೇ ಇಂತಹ ಸುಖನಿದ್ರೆ! ಅವಳಾಗಿ ಎದ್ದ ಮೇಲೆ ಆ ಪರಿಚಾರಿಕೆಯರು ಅವಳಿಗೆ ಸ್ನಾನಮಾಡಿಸಿ, ಊಟ ಬಡಿಸಿದರು. ಆಮೇಲೆ ಆ ಪರಿಚಾರಿಕೆಯರು ಹಿಂದಿರುಗಿ ರಾಜಭವನಕ್ಕೆ ಬಂದು, ಯುವರಾಣಿಯಲ್ಲಿ ಬಂದಿರುವ ಒಳ್ಳೆಯ ಮಾರ್ಪಾಡುಗಳನ್ನು ರಾಜಾರಾಣಿಯರೊಂದಿಗೆ ಹೇಳಿದರು. ಜ್ಯೋತಿಷಾಚಾರ್ಯನು ಹೇಳಿದ ಹಾಗೆ ಮಗಳ ಆರೋಗ್ಯ ಚೆನ್ನಾಗುತ್ತ ಬರುವ ಲಕ್ಷಣಗಳನ್ನು ಕೇಳಿ ರಾಜಾರಾಣಿಯರಿಗೆ ಬಹಳ ಸಂತೋಷವಾಯಿತು.

ಎರಡನೇ ದಿನ ನಂದಿನಿ, ದೇವಯಾನಿ ಎಂಬ ಪರಿಚಾರಿಕೆಯರು ಯುವರಾಣಿಗೆ ಭೋಜನ ಪಾನೀಯಗಳನ್ನು ತೆಗೆದುಕೊಂಡು ಹೋದರು. ಆ ದಿನವೂ ಯುವರಾಣಿಯ ಆರೋಗ್ಯ ಇನ್ನಷ್ಟು ಚೆನ್ನಾಗಿರುವಂತೆ ಗೊತ್ತಾಯಿತು. ಮೂರನೇ ದಿನ ಶಾಂತ, ಶಾರದ ಎಂಬ ಪರಿಚಾರಿಕೆಯರು ಯುವರಾಣಿಗೆ ಭೋಜನ, ಫಲಹಾರ ಪಾನೀಯಗಳನ್ನು ಕೊಟ್ಟು ಬಂದರು. ದಿನದಿಂದ ದಿನಕ್ಕೆ ಕುಮಾರಿಯ ಆರೋಗ್ಯ ಬೆಳಗುತ್ತಾ ಬರುವುದನ್ನು ಕೇಳಿ, ತಾವು ಯಾವಾಗ ಅವಳನ್ನು ನೋಡುವೆವೋ ಎಂದು ರಾಜನೂ ರಾಣಿಯೂ ತುಂಬಾ ಕುತೂಹಲದಿಂದ ದಿನಗಳನ್ನು ಎಣಿಸಿಕೊಂಡಿದ್ದರು.

ಮೊದಲನೇ ಸಾರಿಯ ಮೂರು ತಿಂಗಳಾದ ಮುಂಚಿನ ದಿನ ಸಾಯಂಕಾಲ ಪ್ರಧಾನ ಜ್ಯೋತಿಷಾಚಾರ್ಯನು ರಾಜದರ್ಶನಕ್ಕಾಗಿ ಬಂದಿರುವ ಸಂಗತಿ ತಿಳಿದು, ರಾಜನೇ ಹೋಗಿ ಕರೆದುಕೊಂಡು ಬಂದು ಉಚಿತಾಸನದಲ್ಲಿ ಕೂಡಿಸಿದನು.

ಚಿಂತೆಯ ಮುಖಭಾವದಲ್ಲಿರುವ ರಾಜದಂಪತಿಗಳನ್ನು ನೋಡಿ, ಜ್ಯೋತಿಷಾಚಾರ್ಯನು ಮುಗುಳ್ನಗು ಸೂಸುತ್ತ, "ಮಹಾರಾಜರೇ, ನೀವು ನಾಳೆ ಹೋಗಿ ಯುವರಾಣಿಯನ್ನು ನೋಡಿ ಬರಬಹುದು. ಮಧ್ಯಾಹ್ನದ ಅನಂತರ ಯಾವಾಗ ಬೇಕಾದರೂ ಹೋಗಬಹುದು. ಆದರೆ ಸೂರ್ಯಾಸ್ತಮಾನದೊಳಗೆ ಬಂದುಬಿಡಿ" ಎಂದನು.

"ಮುದ್ದು ವಿದ್ಯಾವತಿಯನ್ನು ನೋಡಿ ಮೂರು ವಾರಗಳಾದುವು. ಅವಳು ಇಲ್ಲಿ ನಮ್ಮ ಮನೆಯಲ್ಲಿದ್ದರೂ ಜ್ಯೋತಿಷರತ್ನರಾದ ನಿಮ್ಮ ಮಾತು ಕೇಳಿದಂದಿನಿಂದಲೇ ನಾನು ಅವಳನ್ನು ಕಣ್ಣೆತ್ತಿ ನೋಡುವುದನ್ನು ಬಿಟ್ಟದ್ದೆ. ಆ ಮೂರು ವಾರಗಳೆಂಬುದು ಮೂರು ವರ್ಷಗಳಾದ ಹಾಗಿದೆ!" ಎಂದಳು ರಾಣಿ. "ಆಚಾರ್ಯರೇ ನಾಳೆ ಹೋಗ

ಬಹುದೆಂದರಲ್ಲಾ? ಚಿಂತೆ ಬಿಡು!" ಎಂದನು ರಾಜ, ರಾಣಿಗೆ ಸಮಾಧಾನವಾಗುವಂತೆ.

ಹಾಗೆಯೇ ರಾಜನು ವಾಚಸ್ಪತಾಚಾರ್ಯನನ್ನು ನೋಡಿ, "ವಿದ್ಯಾವತಿಯ ಗ್ರಹಸಂಚಾರ ಸ್ಥಿತಿಯಲ್ಲಿ ಬದಲಾವಣೆ ಬಂದಿದೆಯೇ? ಈ ವಿಷಯವಾಗಿ ಜಗತ್ಪತಾಚಾರ್ಯರನ್ನು ವಿಚಾರಿಸಿದಿರಾ?" ಎಂದನು.

"ವಿಚಾರಿಸಿದೆನು. ಆತನೂ ನನ್ನ ಅಭಿಪ್ರಾಯಕ್ಕೆ ಏಕೀಭವಿಸಿದ್ದಾನೆ. ಇನ್ನೊಂದು 'ನಲವತ್ತು ದಿನಗಳ ವರೆಗೆ ವಿದ್ಯಾವತಿಯ ಸ್ಥಿತಿ ಹೀಗೆಯೇ ಇರುತ್ತದೆಂದು, ಆಮೇಲೆ ಪ್ರಕಾಶಿಸುತ್ತಾಳೆಂದು ಅವನೂ ಅಭಿಪ್ರಾಯಪಡುತ್ತಾನೆ. ಇನ್ನೇನೂ ಚಿಂತಿಸಬೇಡಿ. ನಾಳೆ ನೀವೇ ನೋಡಿದರೆ ನಿಮಗೇ ಗೊತ್ತಾಗುತ್ತದೆ" ಎಂದು ಹೇಳಿ, ವಾಚಸ್ಪತಾಚಾರ್ಯನು ಅಲ್ಲಿಂದ ಹೊರಟನು.

ರಾಜದಂಪತಿಗಳು ಯುವರಾಣಿಯನ್ನು ನೋಡಲು ಇಪ್ಪತ್ತೊಂದನೇ ದಿನ ಮಧ್ಯಾಹ್ನದ ಮೇಲೆ ತಕ್ಕ ಸಮಯವೆಂದು ಜ್ಯೋತಿಷಾಚಾರ್ಯನು ತಿಳಿಸಿರುವುದರಿಂದ, ಆ ದಿನ ಯುವರಾಣಿ ಮಧ್ಯಾಹ್ನ ಭೋಜನಾದಿಗಳನ್ನು ಮುಗಿಸಿ, ವಿಶ್ರಾಂತಿಯಿಂದ ಎದ್ದ ಮೇಲೆ ಅವಳನ್ನು ನೋಡುವುದು ಉಚಿತವೆಂದುಕೊಂಡರು ರಾಜದಂಪತಿಗಳು.

ಯುವರಾಣಿಯನ್ನು ನೋಡಲು ರಾಜನೂ, ರಾಣಿಯೂ ಹೋಗುತ್ತಾರೆಂದು ತಿಳಿದು ಪ್ರಜೆಗಳು ರಾಜ ಬೀದಿಯ ಇಕ್ಕೆಲಗಳಲ್ಲಿಯೂ ದಾರಿಯುದ್ದಕ್ಕೆ ಸಾಲುಗಟ್ಟಿ ನಿಂತಿದ್ದರು. ಕೆಲವರು ಯುವರಾಣಿಯ ಪ್ರಸ್ತುತ ಪರಿಸ್ಥಿತಿಯನ್ನು ಕುರಿತು ರಾಜಸೇವಕರೊಂದಿಗೆ ಕೇಳುತ್ತಿದ್ದರು. ಆಗ ರಾಜನೇ ಅವರನ್ನು ನೋಡಿ, ದಿನೇ ದಿನೇ ಚೆನ್ನಾಗುತ್ತಿದ್ದಾಳೆಂದು ಮಂದಹಾಸದಿಂದ ಹೇಳುತ್ತಿದ್ದನು.

ಸಾರಸ ಸರೋವರದ ಹತ್ತಿರ ಕಾದುಕೊಂಡಿದ್ದ ದೋಣಿಯವನು ರಾಜನಿಗೂ ರಾಣಿಗೂ ನಮಸ್ಕಾರ ಮಾಡಿದನು. ರಾಜನೂ ರಾಣಿಯೂ ಮಾತ್ರ ದೋಣಿಯನ್ನು ಏರಿ ಕುಳಿತರು. ಅಂಗರಕ್ಷಕರು ತೀರದಲ್ಲೇ ನಿಂತರು. ದೋಣಿ ದ್ವೀಪದ ಕಡೆಗೆ ಕದಲಿತು.





ದ್ವೀಪದಲ್ಲಿ ಭವನದ ಮೆಟ್ಟಲೇರುವ ಜಾಗದಲ್ಲಿ ನಿಂತಿದ್ದ ವೃದ್ಧ ದಾಸಿ ಕಮಲಾ ರಾಜದಂಪತಿಗಳಿಗೆ ನಮಸ್ಕಾರ ಮಾಡಿದಳು. ಅವಳು ರಾಜದಂಪತಿಗಳನ್ನು ಕುಮಾರಿ ವಿದ್ಯಾವತಿ ಇರುವ ವಿಶಾಲವಾದ ಕೋಣೆಯೊಳಗೆ ಕರೆದುಕೊಂಡು ಹೋದಳು.

ಆಗಲೇ ನಿದ್ದೆಯಿಂದೆದ್ದ ಕುಮಾರಿ ವಿದ್ಯಾವತಿ ತಾಯಿತಂದೆಯರನ್ನು ನೋಡಿದ ಕೂಡಲೇ ನಗುತ್ತಾ ಎದ್ದು ನಿಂತು ಇದಿರಾಗಿ ಬಂದಳು. 'ಚೆನ್ನಾಗಿದ್ದೀಯಾ ತಾಯಿ !" ಎಂದು ತಾಯಿ ಮಗಳನ್ನು ಬಾಚಿ ತಬ್ಬಿಕೊಂಡು ತಲೆದಡವಿ ಮುದ್ದಿಸಿದಳು.

ತಮ್ಮ ಕುಮಾರಿಯನ್ನು ನೋಡಿ ರಾಜದಂಪತಿಗಳ ಮುಖಗಳು ಆನಂದದಿಂದ ಅರಳಿ ಇಷ್ಟಗಲವಾದವು. ಸ್ವಲ್ಪ ಹೊತ್ತಾದ ಮೇಲೆ ಮಹಾರಾಣಿ ಕುಮಾರಿಯ ಕೈಹಿಡಿದು ನಡೆಸಿಕೊಂಡು ಪಕ್ಕದಲ್ಲಿರುವ ಉದ್ಯಾನವನಕ್ಕೆ ಹೋದಳು. ಅಲ್ಲಿ ಕುಳಿತು ಮೂವರೂ ಮತ್ತೆ ಸ್ವಲ್ಪ ಹೊತ್ತು ಮಾತಾಡಿದರು. ಮಗಳ ಬಾಯಿ ರುಚಿ, ಜೀರ್ಣಶಕ್ತಿ, ನಿದ್ದೆ, ನೀರಡಿಕೆ ಮುಂತಾದ ಪ್ರಶ್ನೆಗಳು, ಮಗಳಿಂದ ಹೊರಡುವ ಸಂತೋಷದಾಯಕ ಉತ್ತರಗಳು. ಅವಳೂ ತಂದೆ ತಾಯಂದಿರ ಕುಶಲ ವಿಚಾರಣೆ ಮಾಡಿದಳು. ಹೊತ್ತು ಹೋದುದೇ ತಿಳಿಯದಂತೆ ಸೂರ್ಯನು ಅಸ್ತಮಿಸುವ ವೇಳೆ ಬಂತು. ಜ್ಯೋತಿಷಾಚಾರ್ಯನ ವಿಧಿ ಮೀರಬಾರದಷ್ಟೆ ? ರಾಜನೂ ರಾಣಿಯೂ ದೋಣಿಯವರೆಗೆ ಬರುವಾಗ ದಾಸಿ ಕಮಲೆಯೂ ಅಲ್ಲಿಯವರೆಗೆ ಬಂದಳು. ಆಮೇಲೆ ರಾಜದಂಪತಿಗಳು ಆಚೆಗೆ ಹೊರಡುವಾಗ ಕಮಲೆ ಅವರಿಗೆ ವಂದಿಸಿ, ಮೆಟ್ಟಲೇರಿ ಭವನದೊಳಗೆ ಹೋದಳು.

ಮತ್ತೆ ಮೂರು ವಾರಗಳು ಕಳೆದ ಮೇಲೆ, ಜ್ಯೋತಿಷಿ ವಾಚಸ್ಪತಾಚಾರ್ಯನು ಬಂದು ಕುಮಾರಿಯ ದರ್ಶನ ಕಾಲವನ್ನು ತಿಳಿಸಿದ ಪ್ರಕಾರ ರಾಜ ದಂಪತಿಗಳು ದ್ವೀಪದ ಭವನಕ್ಕೆ ಹೋಗಿ ಕ್ಷೇಮವಾಗಿರುವ ಮಗಳನ್ನು ನೋಡಿ ಹಿಂದಿರುಗಿ ಬಂದರು. ಈಸಾರಿ ವಿದ್ಯಾವತಿ ಸ್ವತಃ ಮೆಟ್ಟಲಿಳಿದು ದೋಣಿಯವರೆಗೆ ಬಂದು ತಂದೆ ತಾಯಿಗಳನ್ನು ಎದುರುಗೊಂಡಳು. ಈಗ ಅವಳು ಸಂಪೂರ್ಣ ಆರೋಗ್ಯಶಾಲಿನಿಯಾಗಿರುವುದರಿಂದ ಆ ಬಗ್ಗೆ ಹೆಚ್ಚು ಪ್ರಶ್ನಿಸುವ ಅಗತ್ಯ ಕಾಣಲಿಲ್ಲ. ಮಗಳೊಂದಿಗೆ ಆ ಭವನದಲ್ಲಿ ಸಂತೋಷದಿಂದ ಕಾಲ ಕಳೆದು ಕತ್ತಲೆಯಾಗುವುದರೊಳಗೆ ಅಲ್ಲಿಂದ ಹಿಂದಿರುಗಿದರು.

ಒಂದು ಬದಿಯಲ್ಲಿ ತಮ್ಮ ಮಗಳು ಎಂದಿನಂತಾಗುವಳೆಂಬ ಸಂತೋಷವಿದ್ದರೂ, ಮತ್ತೊಂದು ಕಡೆ ಕುಮಾರಿಯನ್ನು ಬಿಟ್ಟು ಇನ್ನೂ ಸುಮಾರು ಹತ್ತು ತಿಂಗಳು ಕಳೆಯಬೇಕೆಂಬ ಚಿಂತೆಯೂ ಅವರ ಹೃದಯವನ್ನು ವೇಧಿಸಿಕೊಂಡೇ ಇತ್ತು.

ಆಮೇಲೆ ಮತ್ತೊಂದು ಮೂರು ವಾರಗಳು ಕಳೆದುವು. ಲೆಕ್ಕದ ದಿನ ಬೆಳಿಗ್ಗೆ ಜ್ಯೋತಿಷಾಚಾರ್ಯನು ಬರಬೇಕಿತ್ತು, ಯಾಕೋ ಈಸಾರಿ

ಬರಲಿಲ್ಲ. ಪ್ರತಿಸಾರಿಯೂ ಲೆಕ್ಕದ ದಿನ ಬೆಳಿಗ್ಗೆ ಬಂದು ಆ ದಿನದ ಗ್ರಹಸಂಚಾರವನ್ನು ನೋಡಿ ಹೊರಡುವ ಗಳಿಗೆ ತಿಳಿಸುತ್ತೇನೆಂದು ಹೇಳಿದ್ದ ಜ್ಯೋತಿಷಾಚಾರ್ಯನು ಈಸಾರಿ ಏಕೆ ಬರಲಿಲ್ಲ? ಆವನ ಮಾತು ಮೀರಿ ತಾವಾಗಿ ಹೊರಡುವ ಧೈರ್ಯವಿಲ್ಲದೆ ರಾಜದಂಪತಿಗಳು ಚಿಂತೆಗೆ ಬಿದ್ದರು.

ಮರುದಿನವೂ ಜ್ಯೋತಿಷಾಚಾರ್ಯನು ಬರಲಿಲ್ಲ. ರಾಣಿ ರಾಜನೊಂದಿಗೆ, "ಜ್ಯೋತಿಷಾಚಾರ್ಯರನ್ನು ಕರೆದುಕೊಂಡು ಬರಲು ಭಟರನ್ನು ಕಳುಹಿಸೋಣವೇ?" ಎಂದು ಕೇಳಿದಳು.

"ಬೇಡ ದೇವೀ, ಬೇಡ. ಇದು ಮೊದಲಿನಿಂದಲೂ ಜ್ಯೋತಿಷಾಚಾರ್ಯರ ನಿರ್ಣಯದಂತೆಯೇ ನಡೆದ ವ್ಯವಹಾರ. ಇದರಲ್ಲಿ ನಾವಾಗಿ ಏನು ಮಾಡುವುದೂ ಸರಿಯಲ್ಲ. ಗ್ರಹಶಕ್ತಿ ಮಾನವಾತೀತವಾದದ್ದು ಗೊತ್ತಾ? ನಮ್ಮ ಕುಮಾರಿಯ ಕ್ಷೇಮಕ್ಕಾಗಿ ನಾವು ತಪಸ್ಸಿನಂಥ ಕ್ರಮವನ್ನು ಅನುಸರಿಸುವುದನ್ನು ಮರೆಯಬೇಡ. ಆದರಂತೆ ನಮ್ಮ ಮಗಳು ಕ್ಷೇಮವಾಗಿದ್ದಾಳೆಂದು ಪರಿಚಾರಿಕೆಯರು ಹೇಳುತ್ತಿದ್ದಾರಷ್ಟೆ? ಆದ್ದರಿಂದ ನಾವು ಎರಡು ದಿನ ಸಹನೆಯಿಂದಿರೋಣ" ಎಂದು ರಾಣಿಯನ್ನು ಸಮಾಧಾನಪಡಿಸಿದನು ರಾಜ.

ಆದರೆ ಆ ದಿನ ಸಾಯಂಕಾಲವೇ ಜ್ಯೋತಿಷಾಚಾರ್ಯ ವಾಚಸ್ಪತಿ, ಮಿತ್ರ ಜಗತ್ಪತಾಚಾರ್ಯನೊಂದಿಗೆ ರಾಜಭವನಕ್ಕೆ ಬಂದನು. ಅವರನ್ನು ನೋಡಿದ ಕೂಡಲೇ ರಾಜನಿಗೆ ಜೀವ ಚೇತರಿಸಿದಂತಾಗಿ ಗೌರವದಿಂದ ಎದ್ದು ನಿಂತು ಅವರಿಬ್ಬರನ್ನೂ ಗೌರವಿಸಿ ಉಚಿತಾಸನದಲ್ಲಿ ಕುಳ್ಳಿರಿಸಿದನು.

ಆಗ ವಾಚಸ್ಪತಾಚಾರ್ಯನು ರಾಜನನ್ನು ಬೇರೊಂದು ಕೋಣೆಗೆ ಕರೆದೊಯ್ದು, "ಮಹಾರಾಜರೇ, ನೀವು ನಾಳೆ ಬೆಳಂಜಾವದಲ್ಲೇ ಎದ್ದು ನಿಮ್ಮ ಮಗಳನ್ನು ನೋಡಿ ಬರಬೇಕು" ಎಂದನು.

ಜ್ಯೋತಿಷಾಚಾರ್ಯನ ಮಾತಿನಲ್ಲಿರುವ ಅವಸರವನ್ನು ನೋಡಿ, ಏನು ಕಾರಣವೋ ಎಂದು ರಾಜನಿಗೆ ಆಲೋಚನೆ ಬಂತು. ಅಷ್ಟರಲ್ಲಿ ಜಗತ್ಪತಾಚಾರ್ಯನು ಅಲ್ಲಿಗೆ ಬಂದು, "ನಾಳೆ ಸೂರ್ಯೋದಯವಾಗುವುದ





ರೊಳಗೆ ನೀವು ಯುವರಾಣಿಯನ್ನು ನೋಡಲೇ ಬೇಕು. ಆಮೇಲೆ ಮತ್ತು ಒಂಬತ್ತು ದಿನಗಳವರೆಗೆ ಶುಭಗಳಿಗೆಗಳೇ ಇಲ್ಲ. ಆಮೇಲೆ ಯುವರಾಣಿಗೆ ಬರಲಿರುವ ಮೂರು ತಿಂಗಳುಗಳಲ್ಲಿ ತುಂಬಾ ಸಿಕ್ಕು ಸಿಕ್ಕಾದ ಗ್ರಹದಶೆಗಳು ಸುತ್ತಿಕೊಳ್ಳುತ್ತವೆ. ಆ ಸಮಯದಲ್ಲಿ ಅವಳ ಆರೋಗ್ಯಕ್ಕೆ ಯಾವ ಕುಂದೂ ಬರುವುದಿಲ್ಲ. ಆದರೆ..." ಎಂದು ಅವನು ಮುಂದು ವರಿಸಿ ಹೇಳಿದುದನ್ನು ಲಕ್ಷ್ಯಮಾಡದೆ, ಬೆಳಂಜಾಮು ದಲ್ಲಿ ಹೊರಡಬೇಕೆಂಬ ಆತುರದಲ್ಲಿ ರಾಜನು, "ಗೊತ್ತಾಯಿತು ಆಚಾರ್ಯರೇ, ನೀವು ಗ್ರಹಗಳ ಸಿಕ್ಕುಬಿಡಿಸುವ ಪ್ರಯತ್ನ ಮಾಡುವಿರಿ. ಅದನ್ನು ಈಗಿನಿಂದಲೇ ಪ್ರಾರಂಭಿಸಿ ಬಿಡಿರಿ" ಎಂದು ಅವರನ್ನು ಬಿಟ್ಟು ಅಂತಃಪುರದೊಳಗೆ ಹೋದನು ರಾಣಿಗೆ ತಿಳಿಸುವ ಆತುರದಲ್ಲಿ.

"ಕೇಳಿದಿಯಾ ದೇವೀ, ಇಬ್ಬರು ಆಚಾರ್ಯ ಪ್ರವರರೂ ನಾವು ನಾಳೆ ಬೆಳಿಗ್ಗೆ ಬೇಗ ಹೋಗಿ ಕುಮಾರಿಯನ್ನು ನೋಡಬೇಕು. ಇಬ್ಬರೂ ಸೇರಿ ಹೇಳಿಬಿಟ್ಟರು" ಎಂದನು ರಾಜ ರಾಣಿಯೊಂದಿಗೆ.

"ಹೌದೇನು? ಬೆಳಗಾದ ಮೇಲೆ ಹೋಗ ಬಹುದು ತಾನೇ? ಅಷ್ಟು ಬೇಗ ಹೋಗಿ ಅವಳನ್ನು ನಿದ್ದೆಯಿಂದ ಎಬ್ಬಿಸಬೇಕೇ?" ಎಂದಳು ರಾಣಿ.

"ಅದನ್ನೆಲ್ಲಾ ಯೋಚಿಸುವಂತಿಲ್ಲ. ಇನ್ನೊಂದು ಮೂರು ತಿಂಗಳವರೆಗೆ ಗ್ರಹಗಳು ಸಿಕ್ಕುಪಾಶದಿಂದ ಅವಳನ್ನು ಸುತ್ತಿಕೊಳ್ಳುತ್ತವಂತೆ. ಅಷ್ಟರೊಳಗೆ ನಾವು ನೋಡಿ ಬರಬೇಕೆಂದು ಜ್ಯೋತಿಷಾಚಾರ್ಯರ ಆಜ್ಞೆ. ಮೊದಲು ಅವರು ಹೇಳಿದ ಹೊತ್ತಿನಲ್ಲಿ ನೋಡಿ ಬಂದುಬಿಡೋಣ. ಆಮೇಲೆ ಸಾವಕಾಶವಾಗಿ ಆಚಾರ್ಯರನ್ನು ಕಲೆದು ಸಿಕ್ಕುಬಿಡಿಸಲು ಬೇಕಾದ್ದೆಲ್ಲಾ ಮಾಡಿಸಿಕೊಡೋಣ" ಎಂದನು ರಾಜ.

"ಗ್ರಹಗಳ ಸಿಕ್ಕುಪಾಶವೆಂದರೆ ಏನೋ? ಆ ಪಾಶ ಕಣ್ಣಿಗೆ ಕಾಣಿಸುತ್ತೋ ಇಲ್ಲವೋ? ಅದನ್ನೆಲ್ಲಾ ವಿವರವಾಗಿ ಕೇಳಿದಿರಾ ಪ್ರಭೂ!" ಎಂದಳು ಆಂತಕದಿಂದ ರಾಣಿ.

"ಅದೆಲ್ಲಾ ಮತ್ತೆ ಕೇಳುವಾ ಅಂದೆನಲ್ಲಾ!" ಎಂದನು ರಾಜ. ರಾಣಿ ಅಲ್ಲಿಗೆ ಬಾಯಿ ಮುಚ್ಚಿದಳು.

ಮರುದಿನ ಉಷಃಕಾಲದಲ್ಲಿಯೇ ಯಾವುದೊಂದು ಎಚ್ಚರಿಕೆಯ ಮುನ್ಸೂಚನೆ ಕೊಡದೆಯೇ ಬಂದ ರಾಜ ದಂಪತಿಗಳನ್ನು ನೋಡಿ ದೋಣಿಯವನು ಅತ್ಯಾಶ್ಚರ್ಯಪಟ್ಟು ಗಡಿಬಿಡಿಗೆ ಬಿದ್ದನು. ಹಾಗೂ ಹೀಗೂ ಅವನು ರಾಜದಂಪತಿಗಳನ್ನು ದೋಣಿಯಲ್ಲಿ ಕೂಡಿಸಿ ದ್ವೀಪದ ತೀರದಲ್ಲಿ ಇಳಿಸಿದನು. ರಾಜ ದಂಪತಿಗಳನ್ನು ಆಹ್ವಾನಿಸಲು ಅಲ್ಲಿ ಕಮಲೆಯಾಗಲಿ, ಯುವರಾಣಿ ವಿದ್ಯಾವತಿಯಾಗಲೀ ಕಾಣಲಿಲ್ಲ. ತಾವು ಹೀಗೆ ಬರುವ ಸಂಗತಿ ಅವರಿಗೆ ಗೊತ್ತಿಲ್ಲದ್ದ ರಿಂದ ಅವರು ಬಾರದಿರುವುದರಲ್ಲಿ ಆಶ್ಚರ್ಯವೇನಿಲ್ಲ ವೆಂದುಕೊಂಡು ರಾಜದಂಪತಿಗಳು ಮೆಟ್ಟಿಲೇರಿ ಭವನದೊಳಗೆ ಕಾಲಿಟ್ಟರು.

ಆಗ ಅಲ್ಲಿ ಅತ್ಯಂತ ಗಾಬರಿಯಲ್ಲಿ ಕಕ್ಕವಿಕ್ಕಿಯಾಗಿದ್ದ ವೃದ್ಧದಾಸಿ ಕಮಲೆ ಅವರನ್ನು ನೋಡಿ, "ಆಗಲೇ ಇಲ್ಲಿ ನಡೆದದ್ದು ನಿಮಗೆ ಗೊತ್ತಾಗಿಬಿಟ್ಟಿತೇ ಪ್ರಭೂ !" ಎಂದು ಕೂಗಿಕೊಂಡಳು.

"ಏನಾಯಿತು ? ಏನು ನಡೆಯಿತು ? ವಿದ್ಯಾವತಿ ಎಲ್ಲಿ ?" ಎಂದು ರಾಣಿಯೂ ರಾಜನೂ ಒಂದೇ ಬಾಯಿಯಲ್ಲಿ ಕೇಳಿದರು.

"ಅದೇ – ಅದೇ ಹುಡುಕುತ್ತಾ ಇದ್ದೇನೆ. ಯುವರಾಣಿ – ಯುವರಾಣಿ ಎಲ್ಲಿಗೆ ಹೋದಳಪ್ಪಾ ? ಕಾಣೋರಿಲ್ಲವಲ್ಲಾ !..." ಎಂದು ಪರಿಚಾರಿಕೆ ಕಮಲೆ ಹೆದರಿ ಬೆದರಿ ಬೀಳುತ್ತಾ ಅಂದಳು.

"ಭವನದ ಎಲ್ಲಾ ಕಡೆಯೂ ನೋಡಿದಿಯಾ ? ಮೂಲೆಗೀಲೆ ಎಲ್ಲಾ ಹುಡುಕಿದಿಯಾ ?" ಕೇಳಿದನು ರಾಜ.

ಮಹಾರಾಣಿಯ ಬಾಯಿಯಿಂದ ಮಾತೇ ಬರಲಿಲ್ಲ.

"ಪ್ರಭೂ, ನನ್ನ ಜೀವನ ಕಾಲದಲ್ಲಿ ಈವರೆಗೂ ಇಂಥಾದ್ದು ನಡೆದಿರಲಿಲ್ಲ. ಸರಿಯಾಗಿ ನಿದ್ದೆ ಬಾರದಿದ್ದ ನನಗೆ ರಾತ್ರಿ ಪೂರಾ ಬೋದವಿಲ್ಲದಂಥಾ ನಿದ್ದೆ ಯಾಕೆ ಬಂತೋ ! ಎಚ್ಚರಾದಾಗ ತಲೆ ಭಾರವಾಗಿತ್ತು ! ಮತ್ತೆ ಮತ್ತೆ ಮಯಕ ಬರುವ ಹಾಗಾಯಿತು ! ಯುವರಾಣಿಯನ್ನು ಮಂಚದಿಂದೆಂಬ್ಬಿಸಲು ನೋಡಿದೆನು. ಮಂಚದಲ್ಲಿ ಅವಳನ್ನು ಕಾಣಲಿಲ್ಲ. ನನ್ನನ್ನು ಎಬ್ಬಿಸಲು ಮನಸ್ಸು ಬಾರದೆ ಅವಳೊಬ್ಬಳೇ ನೀರಿನ ಕೋಣೆಗೆ ಹೋದಳೇನೋ ಅಂದುಕೊಂಡೆ. ಅಲ್ಲಿಯೂ ಇಲ್ಲ. ಕರೆಯುತ್ತಾ, ಇಡೀ ಭವನದ ಕೋಣೆಗಳನ್ನೆಲ್ಲಾ ತಿರುಗಿದೆ. ಅವಳು ಕಾಣಲೇ ಇಲ್ಲ" ಎಂದಳು ದಾಸಿ ಕಣ್ಣೀರಿಳಿಸುತ್ತ.

"ಎಲ್ಲಿಗೆ ತಾನೇ ಹೋದಾಳು ?" ಎಂದುಕೊಂಡು ರಾಣಿ ಶಯನಗೃಹದೊಳಗೆ ಹೋಗಿ ಎಲ್ಲಾ ತಡವಿ ನೋಡಿ ಹೊರಗೆ ಬಂದಳು.

ರಾಜನೂ ಉಳಿದ ಕೋಣೆಗಳನ್ನೆಲ್ಲಾ ತಿರುಗಾಡಿ ಹುಡುಕಾಡಿ ಹಿಂದಿರುಗಿದನು. "ವಿದ್ಯಾವತೀ ! ವಿದ್ಯಾವತೀ ! ಎಲ್ಲಿರುವಿಯೇ ಅಮ್ಮಾ ! ಓಗೊಡೇ ನನ್ನ ಮುದ್ದೂ ?..." ಎಂದು ರಾಣಿ ಒಂದೇ ಸಮನೆ ರೋದಿಸಿ ರೋದಿಸಿ ತಲೆ ಕೆರೆದುಕೊಂಡು ಕರೆಯುತ್ತಲೇ ಇದ್ದಳು.

ರಾಜಾ ರಾಣಿಯುವರು ಉದ್ಯಾನವನಗಳಲ್ಲೆಲ್ಲಾ ಹುಡುಕಿದರು ಕರೆಯುತ್ತ. ಸುತ್ತುಮುತ್ತಲಿನ ದ್ವೀಪದ ನಾಲ್ಕು ಸುತ್ತಲೂ ತಿರುಗಾಡಿದರು. ಯುವರಾಣಿಯ ಜಾಡು ಎಲ್ಲಿಯೂ ಕಾಣಲಿಲ್ಲ.

ರಾಜನು ದೋಣಿಯವನನ್ನು ನೋಡಿ, "ಸೇನಾಧಿಪತಿಯನ್ನು ಕರೆದುಕೊಂಡು ಬಾ !" ಎಂದು ಆಜ್ಞೆ ಮಾಡಿದನು.

(—ಇನ್ನೂ ಇದೆ)






# ಮಾಯಾ ಭವನ

೨

(ಆಕಸ್ಮಿಕವಾಗಿ ಗುಟ್ಟು ಗೊತ್ತಾಗದ ರೋಗ ದಿಂದ ಬಲಹೀನತೆಗೆ ಗುರಿಯಾದ ವೀರಗಿಯ ಯುವರಾಣಿ ವಿದ್ಯಾವತಿಯನ್ನು ಜ್ಯೋತಿಷಾಚಾರ್ಯನ ಸಲಹೆಯಂತೆ ರಾಜಧಾನಿಗೆ ಸಮೀಪದಲ್ಲಿರುವ ಸರೋವರದಲ್ಲಿರುವ ಬಿಡದಿ ಭವನಕ್ಕೆ ಸಾಗಿಸಿದರು. ಜ್ಯೋತಿಷಾಚಾರ್ಯನು ಹೇಳಿದ ಹೊತ್ತಿಗೆ ರಾಜದಂಪತಿಗಳು ಎರಡು ಎರಡು ಸಾರಿ ಹೋಗಿ ಕುಮಾರಿಯನ್ನು ನೋಡಿ ಬಂದರು. ಮೂರನೇ ಸಾರಿ ಹೋದಾಗ ಅಲ್ಲಿ ಕುಮಾರಿ ಕಾಣಲಿಲ್ಲ. ಹಾಗೆ ಅವಳು ಕಾಣದೆ ಹೋಗಲಿಕ್ಕೆ ಮೊದಲು...)

ಇದ್ದಕ್ಕಿದ್ದ ಹಾಗೆ ಮೆಟ್ಟಿ ಬಿದ್ದವಳಂತೆ ಯುವರಾಣಿ ವಿದ್ಯಾವತಿ ಎದ್ದಳು. ಆಗ ಅವಳ ಕಿವಿಯಲ್ಲಿ "ಏಳಿರೇಳಿರಿ ಯುವರಾಣಿ! ನಾವೀಗಲೇ ನಮ್ಮ ಅರಮನೆ ಸೇರಿಕೊಳ್ಳಬೇಕು. ತಡವಾದರೆ ಅಪಾಯ! ಬಹು ದೊಡ್ಡ ಗಂಡಾಂತರ! ಹುಂ! ಏಳೇಳ್ರಿ!" ಎಂದು ಅವಸರಪಡಿಸುವಂತೆ ತಟ್ಟಿ ಎಬ್ಬಿಸುವ ವೃದ್ಧ ದಾಸಿ ಕಮಲೆಯ ಮಾತು ಕೇಳುತ್ತಿತ್ತು.

"ಯಾಕೆ? ಈ ಅರ್ಧ ರಾತ್ರಿಯಲ್ಲಿ? ಹಾಗೇನು ಬಂತು? ಈ ಅರ್ಧರಾತ್ರಿಯಲ್ಲಿ ಯಾವ ಶಬ್ದವೂ ಕೇಳದಿರುವಾಗ ಏನು ಭಯ ಬಂತು?" ಎಂದು ಅನುಮಾನದಿಂದ ಕೇಳಿದಳು ವಿದ್ಯಾವತಿ.

"ಮಹಾರಾಜರು ಥಕ್ಕನೆ ಅಸ್ವಸ್ಥರಾಗಿದ್ದಾರಂತೆ! ನಿಮ್ಮನ್ನು ನೋಡಲೇಬೇಕಂತೆ! ನಿಮ್ಮ ಹೆಸರನ್ನೇ ಕನವರಿಸಿಕೊಂಡಿದ್ದಾರಂತೆ! ಎಲ್ಲರಿಗೂ ಗಾಬರಿಯಾಗಿದೆ. ನಮ್ಮನ್ನು ಕರೆದುಕೊಂಡು ಹೋಗಲು ದೋಣಿಗಾರನು ಬಂದಿದ್ದಾನೆ. ಪ್ರಶ್ನೆ



ಕೇಳದೆ ಹೊರಡಿರಮ್ಮಾ!'' ಎಂದಳು. ಕಮಲೆ ಚಿಂತೆಯಿಂದ ಕೈಕಾಲುಗೆಟ್ಟವಳ ಹಾಗೆ! ಯಾಕೋ- ಅವಳ ಜುಟ್ಟು ಕೆದರಿ ಅಸ್ತವ್ಯಸ್ತವಾಗಿ ಮುಖದಮೇಲೆ ಬಿದ್ದಿತ್ತು. ಅವಳ ಸ್ವರವು ಮತ್ತಾವಳ ಕಂಠಸ್ವರದ ಹಾಗೋ ಕೇಳುತ್ತಿತ್ತು. ಹಾಗೇಕೆ? ಯಾರಿವಳು? ಏಳುವಂತೆ ಒಂದೇ ಸಮನೆ ಅವಸರಪಡಿಸುವಳೇಕೆ?

“ಈ ಬಿಡದಿ ಭವನದಿಂದ ಕದಲಬಾರದೆಂದು ಜ್ಯೋತಿಷ್ಯರು ಹೇಳಿದ್ದಾರಲ್ಲ?'' ಎಂದಳು ವಿದ್ಯಾವತಿ! ಆ ಮಾತು ತಾನು ಮೀರಲಾರೆನೆಂಬ ದೃಢತೆಯಲ್ಲಿ.

“ಅದೆಲ್ಲಾ ನಿಜವೇ ಅಮ್ಮಾ! ಅದೆಲ್ಲಾ ತಿಳಿದೇ ಮಹಾರಾಜರೂ, ರಾಣಿಯವರೂ ಇಲ್ಲಿಗೆ ಬರಬೇಕೆಂದಿದ್ದರಂತೆ. ಅಷ್ಟರಲ್ಲಿ ಹಠಾತ್ತಾಗಿ ಮಹಾರಾಜರು ಬಲಹೀನರಾಗಿ ಬಿದ್ದುದರಿಂದ, ನಿಮ್ಮನ್ನೇ ಅಲ್ಲಿಗೆ ಬರಲು ಆಜ್ಞಾಪಿಸಿದ್ದಾರೆ. ರಾಜದಂಪತಿಗಳ ಅಪೇಕ್ಷೆಯಂತೆಯೇ ನಾವು ಅಲ್ಲಿಗೆ ಹೋಗಬೇಕು. ಮತ್ತೆ ನಾಳೆಯೇ ಹಿಂದಿರುಗಿ ಬಂದರಾಯಿತು'' ಎಂದಳು ಕಮಲೆ.

ವಿದ್ಯಾವತಿ ಹಾಸಿಗೆಯ ಮೇಲಿನಿಂದ ಎದ್ದಳು. ಇಬ್ಬರೂ ಹೊರಗೆ ಬಂದು ದೋಣಿಯನ್ನು ಸಮೀಪಿಸಿದರು.

ಆಕಾಶವೆಲ್ಲಾ ಮೇಘಾವೃತ್ತವಾಗಿರುವುದರಿಂದ ಬೆಳದಿಂಗಳು ಮಸುಕು ಮಸುಕಾಗಿತ್ತು. ಆದುದರಿಂದ ಮಾಮೂಲು ದಾರಿಯಲ್ಲಿ ಸಾಗದೆ, ಬೇರೊಂದು ದಾರಿಯಲ್ಲಿ ದೋಣಿ ಸಾಗುವ ಸಂಗತಿ ವಿದ್ಯಾವತಿಗೆ ತಿಳಿಯದೆ ಹೋಯಿತು. ಕಮಲೆ ಅವಳಿಗಿಂತ ವೇಗವಾಗಿ ಲಗುಬಗನೆ ನಡೆದು ದೋಣಿಯೊಳಗೆ ಹಾರಿದ ಹಾಗೆ ಹತ್ತಿ ಯುವರಾಣಿಯನ್ನು ಎಳೆದೇರಿಸಿಕೊಳ್ಳಲು ಕೈಚಾಚಿದಳು. ಯುವರಾಣಿ ದೋಣಿಯೊಳಗೆ ಸೇರುತ್ತಲೇ ದೋಣಿ ತೀರವನ್ನು ಬಿಟ್ಟು ಕದಲಿತು.

ಯುವರಾಣಿಗೆ ಒಂದು ಬಗೆಯ ನಿದ್ರೆಯ ಮತ್ತು ಹತ್ತಿತ್ತು. ಕಮಲೆ ಅವಳ ಹತ್ತಿರ ಕುಳಿತಿದ್ದಳು. ಏನೂ ಮಾತು ಹೊರಡಿಸದೆ, ಬಾಯಿ ಮುಚ್ಚಿ ಸುಮ್ಮನೆ ಕುಳಿತಿದ್ದಳು.

ಯುವರಾಣಿಯ ಮನಸ್ಸೆಲ್ಲಾ ಅವಳ ತಂದೆಯ ಆರೋಗ್ಯ ಥಕ್ಕನೆ ಹಾಗೇಕೆ ಕೆಟ್ಟಿತು? ಈಗ ಹೇಗಿರುವರೋ?.. ಇದೇ ಯೋಚನೆಯಾಗಿತ್ತು. ಆದ್ದರಿಂದ ದೋಣಿ ಆಚೆಯ ತೀರ ಸೇರಲಿಕ್ಕೆ ಯಾಕಿಷ್ಟು ಹೊತ್ತಾಯಿತೆಂದು ಕೂಡಾ ಅವಳಿಗೆ ತಿಳಿಯಲಿಲ್ಲ.

ಆಚೆಯ ತೀರದಲ್ಲಿ ಮೇನಾ ಇಟ್ಟುಕೊಂಡು ಬೋಯಿಗಳು ತಯಾರಾಗಿದ್ದರು. ಯುವ ರಾಣಿ ತೀರ ಸೇರಿದ ಕೂಡಲೇ ಬೋಯಿಗಳು ಮೇನಾ ಎತ್ತಿದ್ದೂ, ನಡೆದದ್ದೂ ಒಮ್ಮೆಗೇ ನಡೆಯಿತು.

ಕಮಲೆ ಮೇನಾದ ಹಿಂದೆ ಬರುತ್ತಿದ್ದಾಳೆಂದುಕೊಂಡ ಯುವರಾಣಿ ನಿಶ್ಚಿಂತೆಯಿಂದ ಕಣ್ಣು ಮುಚ್ಚಿದಳು.

ಮೇನಾ ಥಕ್ಕನೆ ಒಂದು ಬದಿಗೆ ವಾಲಿದ್ದರಿಂದ ಯುವರಾಣಿಗೆ ಎಚ್ಚರವಾಯಿತು. ಅರಮನೆಗೆ ಹೋಗುವ ದಾರಿಯಲ್ಲಿ ಎಂತಹ ಏರು ತಗ್ಗುಗಳೂ ಇರಲಿಲ್ಲ. ಆದ್ದರಿಂದ ಮೇನಾ ಎಲ್ಲಿಗೆ ಹೋಗುತ್ತದೆ ಎಂಬ ಅನುಮಾನದಲ್ಲಿ ತೆರೆ ಸರಿಸಿ ನೋಡಿದಳು ವಿದ್ಯಾವತಿ. ಪರಿಚಾರಿಕೆ ಕಮಲೆಯ ಜಾಡು ಅಲ್ಲೆಲ್ಲಿಯೂ ಕಾಣಲಿಲ್ಲ. ಆದ್ದರಿಂದ ತಾನೀಗ ಅರಮನೆಗೆ ಹೋಗುವುದಲ್ಲವೆಂದೂ, ಬೇರೆ ಎಲ್ಲಿಗೋ ಒಯ್ಯಲ್ಪಡುತ್ತಿದ್ದೇನೆಂದೂ ಅವಳಿಗೆ ಗೊತ್ತಾಯಿತು. ಹೀಗೆ ಎಲ್ಲಿಗೆ ಒಯ್ಯಲ್ಪಡುತ್ತೇನೆ? ಯಾಕೆ? ಅದು ಅರಣ್ಯದ ನಡುವೆ ಮಧ್ಯ ರಾತ್ರಿಯ ಹೊತ್ತು! ಈಗ ಬೋಯಿಗಳೊಂದಿಗೆ ಕೇಳಿದರೆ ಹೇಳಲಾರರೆಂದೂ ಅವಳಿಗೆ ಗೊತ್ತು! ಹೀಗೆ ಸಾಗುತ್ತಿದ್ದ ಮೇಲೆ ಸ್ವಲ್ಪ ಹೊತ್ತಿನಲ್ಲಿ ಒಂದು ಕಡೆಯಲ್ಲಿ ನಿಂತು ನೆಲವನ್ನು ತಲಪಿತು.

"ಹೊರಗೆ ಬನ್ನಿ ಯುವರಾಣಿಯವರೇ" ಎಂದು ಸ್ತ್ರೀ ಕಂಠವೊಂದು ಅವಳನ್ನು ಕರೆಯಿತು.

ಯುವರಾಣಿ ಹೊರಗೆ ಬಂದು ನಿಂತು, ಸುತ್ತುಮುತ್ತಲೂ ನೋಡಿದಳು.

ಮೂರು ಸುತ್ತಲೂ ದಟ್ಟವಾದ ಅರಣ್ಯ.



ಇದಿರಿನಲ್ಲಿ ಬ್ರಹ್ಮಾಂಡವಾದೊಂದು ಮಾಳಿಗೆ. ಮಹಾ ಭವನ. ವೇಷ ಭಾಷೆ ನಟನೆಯಲ್ಲಿ ಯುವರಾಣಿಯ ವೃದ್ಧ ಪರಿಚಾರಿಕೆಯ ಹಾಗೆ ಬಂದವಳು ತನಗಿಂತ ಮೊದಲೇ ಅಲ್ಲಿರಬೇಕಾದರೆ ಅವಳೆಷ್ಟು ಚುರುಕು! ವೃದ್ಧೆಗೆ ಹೇಗೆ ಬಂದೀತು ಅಷ್ಟು ಚುರುಕು?

"ಈಗ ನಾವು ಎಲ್ಲಿದ್ದೇವೆ?" ಎಂದು ಕೇಳಿದಳು ಯುವರಾಣಿ. ಅವಳೇನೂ ಮಾತಾಡಲಿಲ್ಲ.

"ಸತ್ಯ ಹೇಳಿ ಬಿಡು, ನಿಜಕ್ಕೂ ಯಾರು ನೀನು? ನನ್ನ ತಂದೆಗೆ ಸೌಖ್ಯವಿಲ್ಲವೆಂದೂ, ನನ್ನನ್ನು ನೋಡಬೇಕೆಂದಿದ್ದಾರೆಂದೂ ಹೇಳಿದಿಯಷ್ಟೆ? ಸತ್ಯ ಹೇಳಿ ಬಿಡು! ಯಾರು ನೀನು? ನನ್ನಲ್ಲಿಗೆ ತರಿಸಿಕೊಂಡವನು ಯಾರು? ಏನು ಉದ್ದೇಶ ಅವನದು?" ಎಂದು ಪ್ರಶ್ನೆಗಳ ಮೇಲೆ ಪ್ರಶ್ನೆ ಮಾಡಿದಳು ಯುವರಾಣಿ.



"ನೀವು ನನ್ನನ್ನು ನಿಮ್ಮ ಪರಿಚಾರಿಕೆ ಕಮಲೆ ಎಂದೆ ನೆನೆದು ಕರೆಯಿರಿ. ಉಳಿದುದೆಲ್ಲಾ ಕ್ರಮವಾಗಿ ನಿಮಗೆ ತನ್ನಷ್ಟಕ್ಕೆ ತಿಳಿಯುತ್ತದೆ. ಈಗ ಬನ್ನಿ, ನಾನು ಹೇಳಿದ ಹಾಗೆ ನಡೀರಿ, ಬಿಡದಿ ಮನೆಯಲ್ಲೇ ನಿಮಗೆ ನಿದ್ರಾಭಂಗವಾಗಿದೆ. ನಿಮ್ಮ ತಲೆ ತುಂಬಾ ಭ್ರಮೆ ತುಂಬಿದೆ. ಸ್ವಸ್ಥ ಮಲಗಿರೀಗ" ಎಂದಳಾ ಸ್ತ್ರೀ ದೃಢಕಂಠದಿಂದ.

ಆಮೇಲೆ ಅವಳು ಬೋಯಿಗಳ ಕಡೆಗೆ ತಿರುಗಿ, 'ಹುಂ, ಇನ್ನು ನೀವು ಹೋಗಬಹುದು" ಎಂದಳು.

ಅವರು ಅವಳಿಗೆ ಬಾಗಿ ನಮಸ್ಕಾರ ಮಾಡಿ ಹೊರಟು ಹೋದರು. ಆಮೇಲೆ ಪರಿಚಾರಿಕಾ ವೇಷಧಾರಿಣಿ, ಬೇಗಬೇಗನೇ ಮೆಟ್ಟಲು ಹತ್ತಿ ಭವನದ ಮೇಲಂತಸ್ತಿಗೆ ಹೋಗತೊಡಗಿದಳು. ವಿದ್ಯಾವತಿಗೆ ಅವಳನ್ನು ಅನುಸರಿಸುವುದರ ಹೊರತು ಬೇರೆ ಗತಿ ಇರಲಿಲ್ಲ.

ಅತ್ಯಂತ ಸುಂದರವಾಗಿತ್ತು ಆ ಮಾಯಾ ಭವನ. ಬಹಳ ವಿಶಾಲವಾಗಿತ್ತು ಆ ಕೋಣೆ. ಗೋಡೆಗಳಿಗೂ, ಸ್ತಂಭಗಳಿಗೂ ನಿಲುಗನ್ನಡಿಗಳನ್ನು ಅಳವಡಿಸಲಾಗಿತ್ತು. ಎತ್ತ ತಿರುಗಿದರೂ ವಿದ್ಯಾವತಿಯ ಪ್ರತಿಬಿಂಬಗಳೇ! ಆ ಸ್ತ್ರೀ ವಿದ್ಯಾವತಿಯನ್ನು ಕರೆದುಕೊಂಡು, ಭವನದ ಮುಂದಿರುವ ವಿಶಾಲವಾದ ಮಂಟಪವನ್ನು ದಾಟಿ, ಭವನದ ಕೊನೆಯ ಮೆಟ್ಟಲಿನ ಹತ್ತಿರ ಹೋದರು. ಅಲ್ಲಿಂದ ಮತ್ತೆ ಮೆಟ್ಟಲೇರಿ ಮೇಲ್ಮಾಳಿಗೆಯ ವಿಶಾಲವಾದೊಂದು ಕೋಣೆಯನ್ನು ಸೇರಿದರು.

ಆ ಕೋಣೆ ವಿಶಾಲವಾಗಿ, ಮಣಿಮಾಣಿಕ್ಯಗಳಿಂದ ಸಿಂಗರಿಸಲ್ಪಟ್ಟ ಬೊಂಬೆಗಳಿಂದ,

"ಸಿಟ್ಟು ಮಾಡಬೇಡ, ಯುವರಾಣಿ! ನಿಮ್ಮ ಪ್ರಶ್ನೆಗಳಿಗೆಲ್ಲಾ ಉತ್ತರಕೊಡಲು ನಾನು ಶಕ್ತಳಲ್ಲ. ಸರಿಯೂ ಅಲ್ಲ. ಈ ಮಹಾಭವನದ ಹೆಸರು ಮಾತ್ರ ತಿಳಿದುಕೊಳ್ಳಿ, ಸಾಕು. ಇದರ ಹೆಸರು ಮಾಯಾಭವನ. ಇಷ್ಟು ತಿಳಿದರೆ ಸಾಕು. ಮತ್ತೊಂದು ಮುಖ್ಯ ವಿಷಯವೇನೆಂದರೆ, ಈ ಭವನದಲ್ಲಿ ನಿಮಗೆ ಯಾವ ಭಯವೂ ಇಲ್ಲ. ನಿಮ್ಮನ್ನು ಕ್ಷೇಮವಾಗಿ ನೋಡಿಕೊಳ್ಳುವ ಬಾಧ್ಯತೆ ನನ್ನದು. ನಿಮಗೆ ಯಾವ ಕೊರತೆಯೂ ಇಲ್ಲದಂತೆ ನೋಡಿಕೊಳ್ಳುತ್ತೇನೆ. ಅದುವರೆಗೆ... ಎಂದೇನೋ ಹೇಳಲು ನೋಡಿ, ಬಾಯಿ ಮುಚ್ಚಿದಳು.

"ಇಷ್ಟೆಲ್ಲಾ ಕೊಚ್ಚುವವಳು ನೀನಾರೆಂದು ಹೇಳದೆ ಮುಚ್ಚಿಟ್ಟುಕೊಂಡಿರುವಿ? ಈಗಾದರೂ ಹೇಳುವಿಯಾ?" ಕೇಳಿದಳು ಯುವರಾಣಿ.



ಕಂಬಗಳಿಂದ ಅತ್ಯಂತ ಸುಸುಂದರವಾಗಿ ಶೋಬಿಸುತ್ತಿತ್ತು. ಎತ್ತ ನೋಡಿದರೂ ಕನ್ನಡಿಗಳ ಮಯ!

ಆ ಸ್ತ್ರೀ ಆ ಕೋಣೆಯ ಒಂದು ಕಡೆಯಲ್ಲಿದ್ದ ಪಟ್ಟೆ ಮಂಚವನ್ನು ತೋರಿಸಿ, "ಮಹಾರಾಣಿಯವರೇ! ನೀವಿಲ್ಲಿ ಹಾಯಾಗಿ ನಿದ್ರೆ ಮಾಡಬಹುದು. ನಾನು ಬಂದು ಎಬ್ಬಿಸುವವರೆಗೂ ಏಳುವುದು ಬೇಡ. ಹುಂ, ಏರಿರಿ ಮಂಚವನ್ನು!" ಎಂದಳು ಅಧಿಕಾರ ಧ್ವನಿಸುವ ಕಂಠದಿಂದ.

ವಿದ್ಯಾವತಿ ಅವಳು ಹೇಳಿದ್ದನ್ನು ಅಲ್ಲಗಳೆಯದೆ, ಮೌನವಾಗಿ ಮಂಚದ ಮೇಲೇರಿ ಶರೀರ ಚಾಚಿ ಕಣ್ಣು ಮುಚ್ಚಿಕೊಂಡಳು. ಆ ಸ್ತ್ರೀ ತನ್ನನ್ನೇಕೆ ಇಲ್ಲಿಗೆ ಕರೆದು ತಂದು ಹೀಗೆ ಮಾಡಿದಳು? ಒಂದು ವೇಳೆ ಅವಳು ಹೇಳಿದ್ದೆಲ್ಲಾ ಸುಳ್ಳೇ? ಅಪ್ಪನ ಆರೋಗ್ಯದ ವಿಷಯದಲ್ಲಿಯೂ ಸುಳ್ಳು ಹೇಳಿದಳೇ? ಈಗ ತನ್ನನ್ನು ಕಾಣದ ನಿಜಕ್ಕೂ ಅವರ ಆರೋಗ್ಯ ಕೆಟ್ಟಿತೋ ಏನೋ? ವೃದ್ಧ ದಾಸಿ ಕಮಲೆಯೂ ಸರೋವರ ಬಿಡದಿ ಮನೆಯೊಳಗೆ ಇದ್ದಾಳೆ! ಭಗವಂತಾ! ಅವಳಿಗೆ ಯಾವ ಆಪತ್ತೂ ಬಾರದಂತೆ ಕಾಪಾಡು! ಈ ಮಾಯಾಭವನದಲ್ಲಿ ತನಗೆ ಮುಂದೆ ಮುಂದೆ ಎಂಥೆಂಥಾ ಅನುಭವಗಳು ಕಾದಿದೆಯೋ? ಭಗವಾನ್! ಬಂದದ್ದೆಲ್ಲಾ ಬರಲಿ. ಗೋವಿಂದನ ದಯೆಯೊಂದಿರಲಿ! ಹೀಗೆ ಅವಳು ಬಗೆ ಬಗೆಯಾಗಿ ಆಲೋಚನೆ ಮಾಡಿಕೊಂಡಿದ್ದಳು. ಅದಕ್ಕೆ ಅಂತ್ಯವೇ ಕಾಣಲಿಲ್ಲ!

ಸೇನಾನಾಯಕ ಉಗ್ರಸೇನನೂ, ಮಹಾರಾಣಿ ವಜ್ರೇಶ್ವರೀ ದೇವಿಯ ಸಹೋದರರನೂ ಹೋಗಿ ದೋಣಿಯವನ ಹತ್ತಿರ ರಾಜನು ಕರೆಯುವನೆಂದು ಹೇಳಿದ್ದರು. ಆ ಕೂಡಲೇ ಅವನು ಸ್ವಲ್ಪ ಕೂಡಾ ಆಲಸ್ಯ ಮಾಡದೆ ಬಿಡದಿ ಭವನದ ಹತ್ತಿರ ಬಂದಿದ್ದನು. ಅಲ್ಲಿ ಕಾದಿದ್ದ ರಾಜನೊಂದಿಗೆ "ಇದೋ ಬಂದೆ ಮಹಾಪ್ರಭೂ. ಏನಪ್ಪಣೆ?" ಎಂದು ಕೇಳಿದನು.

ರಾಜನು ಅವನನ್ನು ನೋಡಿ, " ಯಾರು ನಿನ್ನನ್ನು ಬರಹೇಳಿದರು? ನಿನ್ನೆಯಿಂದ ಏನೇನಾಯಿತು? ನಡೆದದ್ದು ನಡೆದ ಹಾಗೆಯೇ ಹೇಳು"ಎಂದನು

ದೋಣಿಯವನು ಸ್ವಲ್ಪ ಹೊತ್ತು ಆಲೋಚನೆ ಮಾಡಿ, ರಾಜನೊಂದಿಗೆ "ಮಹಾಪ್ರಭೂ, ಇಲ್ಲಿ ಸಮೀಪದಲ್ಲೆಲ್ಲಿಯೂ ಇದೊಂದು ನನ್ನ ದೋಣಿಯ ಹೊರತು ಇನ್ನೊಂದು ದೋಣಿ ಇಲ್ಲ. ಆದ್ದರಿಂದ ಯುವರಾಣಿಯವರು

ದೋಣಿಯಲ್ಲಿ ಎಬ್ಬರೇ ಹೋಗಿರಲು ಸಾಧ್ಯವಿಲ್ಲ. ಸರೋವರದ ಆಚೆಯ ತೀರ ಬಹು ದೂರದಲ್ಲಿದೆ. ಕೆಲವು ಕಡೆಯಲ್ಲಂತೂ ಇನ್ನೂ ಹೆಚ್ಚು ಆಳವಾಗಿದೆ. ಆದ್ದರಿಂದ ಯುವರಾಣಿಯವರು ಎಷ್ಟೇ ಗಟ್ಟಿಗರಾದರೂ ಈಜಿಕೊಂಡು ಹೋದರೆಂದರೆ ನಂಬುವುದು ಸಾಧ್ಯವಿಲ್ಲ. ಅವರಿಗೆ ಹಾಗೆ ಹೋಗಬೇಕಾದ ಅಗತ್ಯವೂ ಇಲ್ಲ.

ಅರಣ್ಯ ಪ್ರದೇಶವಾದುದರಿಂದ ಥಕ್ಕನೆ ಸುಂಟರಗಾಳಿ ಆಗಾಗ ಎದ್ದು ಬಿಡುವ ಭಯವೂ ಉಂಟು. ಆ ಸುಂಟರ ಗಾಳಿಯನ್ನು ಅದರ ಪ್ರಕಾರ ಹೋಗಲು ಬಿಡದೆ ಪಕ್ಕದ ಇನ್ನೊಂದು ಅರಣ್ಯದಲ್ಲೆದ್ದ ಮಹಾ ಸುಂಟರಗಾಳಿ ಇದಕ್ಕೆ ಢೀ ಕೊಟ್ಟು ದೊಡ್ಡ ಅವಾಂತರ ಎದ್ದು ಬಿಡುವ ಭಯವೂ ಉಂಟು.

ಎಂತಹ ಬಲಿಷ್ಠರಿಂದಾದರೂ ಆ ಶಕ್ತಿಯನ್ನು ತಡೆದು ಕೊಂಡು ಬದುಕಲಿಕ್ಕೆ ಸಾಧ್ಯವೇ ಇಲ್ಲ. ಹಾಗಿರುವಾಗ ಸಾಧಾರಣ ಅಬಲೆಯೊಬ್ಬಳು ಎಷ್ಟೇ ಯುದ್ಧಾಭ್ಯಾಸದಲ್ಲಿ ಪಳಗಿದವಳಾದರೂ ಅದನ್ನು ತಡೆದು ಬದುಕಲು ಸಾಧ್ಯವಿಲ್ಲ. ಆದ್ದರಿಂದ ಯಾರೋ ಕಳ್ಳತನವಾಗಿ ಬಿಡದಿ ಭವನದೊಳಗೆ ಪ್ರವೇಶಿಸಿ, ಯುವರಾಣಿ ಯವರನ್ನು ಒಳ್ಳೆಯ ಮಾತಿನಿಂದ ಒಲಿಸಿಯೋ ಬಲವಂತದಿಂದಲೋ ಎತ್ತಿಕೊಂಡು ಹೋಗಿರ ಬೇಕು. ಅಂದರೆ ವಿದ್ಯಾವತಿಯನ್ನು ಯಾರೋ ಅಪಹರಿಸಿ ಒಯ್ದಿದ್ದಾರೆಂದೇ ಅರ್ಥ ಮಾಡ ಬೇಕಾಗುತ್ತದೆ'' ಎಂದನು.

ರಾಜನು ಮೌನ ಗಾಂಭೀರ್ಯದಿಂದ ತಲೆದೂಗಿದನು. ವೃದ್ಧ ಪರಿಚಾರಿಕೆ ಕಮಲೆಯನ್ನು ಮಾತ್ರ ಬಿಡದಿ ಭವನದೊಳಗೆ ಬಿಟ್ಟು, ಉಗ್ರಸೇನನೂ, ರಾಣಿಯೂ ರಾಜನೂ ಬಂದು ದೋಣಿಯೊಳಗೆ ಕುಳಿತರು. ದೋಣಿ ಮುಂದೆ ಕದಲಿತು.

"ಕಣ್ಮಣಿ ವಿದ್ಯಾವತಿ ಏನಾದಳು? ಎಲ್ಲಿಗೆ ಹೋಗಲ್ಪಟ್ಟಳು? ಅವಳನ್ನು ಯಾರು ಅಪಹರಿಸಿದ್ದಾರು? - ಇದನ್ನೆಲ್ಲಾ ಪತ್ತೆ ಮಾಡಿ ಸತ್ಯ ಕಂಡು ಹಿಡಿದು ಅವಳನ್ನು ರಕ್ಷಿಸುವುದು ಹೇಗೆ? ಮೂವರೂ ಬಹು ತೀವ್ರವಾಗಿ ಆಲೋಚಿಸುತ್ತಾ ರಾಜಭವನವನ್ನು ಸೇರಿದರು. ತಲೆಗೆ ಬಿಸಿ ಏರುತ್ತಿತ್ತೇ ಹೊರತು ಅಂತ್ಯ ಗೊತ್ತಾಗಲಿಲ್ಲ. (-ಇನ್ನೂ ಇದೆ)





# ಮಾಯಾಭವನ

೪

[ಜ್ಯೋತಿಷಾಚಾರ್ಯನ ಸಲಹೆಯ ಪ್ರಕಾರ ವೀರಸೇನ ಮಹಾರಾಜನು ಮಹಾರಾಣಿಯೊಂದಿಗೆ ಕೂಡಿ ಸರೋವರದ ಬಿಡದಿ ಭವನದಲ್ಲಿ ವಿಶ್ರಾಂತಿ ತೆಗೆದುಕೊಳುತ್ತಿರುವ ಕುಮಾರಿ ವಿದ್ಯಾವತಿಯನ್ನು ನೋಡಲು ಮೂರನೇ ಸಾರಿ ಹೋದಾಗ, ಅಲ್ಲಿ ಅವಳು ಕಾಣಿಸಲಿಲ್ಲ. ಅವಳ ಜಾಡು ತಿಳಿದುಕೊಳ್ಳುವುದು ಹೇಗೋ ಎಂದು ಆಲೋಚಿಸುತ್ತ, ರಾಜನೂ ರಾಣಿಯೂ, ಸೇನಾನಿ ಉಗ್ರಸೇನನೂ, ರಾಜಪ್ರಾಸಾದವನ್ನು ಸೇರಿದರು - ಆಮೇಲೆ]

ವೀರಸೇನ ಮಹಾರಾಜನು ಬೆಳಗಿನ ತಕ್ಕ ವೇಳೆಯಲ್ಲಿ ಸಭಾಭವನ ಸೇರಿ ಒಡ್ಡೋಲಗ ನಡೆಸಿಕೊಂಡಿದ್ದನು. ಮಂತ್ರಿಗಳೂ, ಸೇನಾನಾಯಕರೂ, ದಂಡನಾಯಕರೂ, ಸಲಹಾದಾರರೂ ಉಳಿದೆಲ್ಲರೂ ಒಡ್ಡೋಲಗ ಭವನಕ್ಕೆ ಹಾಜರಾದರು.

ಮಹಾರಾಜನು ಸಭಾಸದರಿಗೆ ಯುವರಾಣಿ ಅದೃಶ್ಯಳಾದ ಸಂಗತಿಯನ್ನು ಕ್ಲಿಪ್ತವಾಗಿ ಎಲ್ಲರಿಗೂ ಅರ್ಥವಾಗುವ ಹಾಗೆ ವಿವರಿಸಿದನು.

ರಾಜನ ಮಾತುಗಳು ಮುಗಿದ ಕೂಡಲೇ ಸಭೆಯಲ್ಲಿ ಒಂದು ಮೂಲೆಯಲ್ಲಿ ಗುಸುಗುಸು ಕೇಳ ಬಂದವು.

ರಾಜನು ಆ ಕಡೆಗೆ ಮುಖ ತಿರುಗಿಸಿ ನೋಡಿದನು. ಆಗ ರಾಜನ ಸಲಹಾದಾರನೊಬ್ಬನು ಎದ್ದು ನಿಂತು ''ಮಹಾಪ್ರಭುಗಳು ಮನ್ನಿಸುವ ಹಾಗಿದ್ದರೆ ನನ್ನದೊಂದು ಚಿಕ್ಕ ಬಿನ್ನಹ ಮಾಡುತ್ತೇನೆ'' ಎಂದನು.

ಹೇಳುವಂತೆ ರಾಜನು ತಲೆಯೊಲಿದನು.



'ಯುವರಾಣಿ ವಿದ್ಯಾವತೀ ದೇವಿಯವರನ್ನು ಬೇಸಗೆಯ ಬಿಡದಿ ಭವನಕ್ಕೆ ಸಾಗಿಸುವಾಗ ಅದಕ್ಕೆ ಕಟ್ಟು ದಿಟ್ಟವಾದ ಕಾವಲಿಡದ್ದು ಆಶ್ಚರ್ಯವನ್ನುಂಟು ಮಾಡುತ್ತದೆ. ಯುವ ರಾಣಿಯ ಸೇವೆಗಳಿಗಾಗಿ ಒಬ್ಬಳು ವೃದ್ಧ ಪರಿ ಚಾರಿಕೆಯನ್ನು ಮಾತ್ರ ಕಳುಹಿಸುವುದು. ಆಹಾರ ಪದಾರ್ಥಗಳನ್ನು ತೆಗೆದುಕೊಂಡು ಹೋಗುವ ಪರಿಚಾರಿಕೆಯರು ಕೂಡಲೇ ಹಿಂದಿ ರುಗಿ ಬಿಡಬೇಕೆಂದು ಜ್ಯೋತಿಷಾಚಾರ್ಯರು ನಿಬಂಧನೆ ವಿಧಿಸಿದ್ದು ರಾಜನೀತಿಯಂತೆ ನೋಡಿ ದರೆ ಇನ್ನೂ ಹೆಚ್ಚಿನ ಅವಿಶ್ವಾಸವನ್ನುಂಟು ಮಾಡುತ್ತದೆ. ಬಹಳ ವಿಚಿತ್ರವಾಗಿಯೂ ಕಾಣು ತ್ತದೆ ಜ್ಯೋತಿಷಾಚಾರ್ಯನನ್ನು ಮಿತಿ ಮೀರಿ ನಂಬಿದಿರೋ ಅನಿಸುತ್ತದೆ. ಅಂದರೆ ಅವರಿಗೆ ಹೇಳದೆ ರಾಜನೀತಿ ನಡೆಸಬೇಕಿತ್ತು ಪ್ರಭುಗಳು'' ಎಂದನು ಆ ಸಲಹಾದಾರ. ಅವನ ಮಾತು ಗಳಿಂದ ಸಭೆಯಲ್ಲಿ ಕಲಕಲರವವೆದ್ದಿತು.

"ಈ ಸಮಯದಲ್ಲಿ ವಾಚಸ್ಪತ್ಯಾಚಾರ್ಯ ರನ್ನು ಶಂಕಿಸುವುದು ಭಾವ್ಯವಲ್ಲ. ಅವರು ರಾಜ ಕುಟುಂಬಕ್ಕೆ ಅತ್ಯಂತ ಸನ್ನಿಹಿತರು. ಅವರ ಮೇಲೆ ನಮಗೆ ಅಚಂಚಲವಾದ ಗಟ್ಟಿ ವಿಶ್ವಾಸ ವಿದೆ. ಅದಲ್ಲದೆ ನಿನ್ನೆ ಅವರೇ ಸ್ವತಃ ಬಂದು ಈ ದಿನ ಬೆಳಂಜಾಮದಲ್ಲಿ ಹೋಗಿ ಯುವರಾಣಿ ಯನ್ನು ನೋಡಿರೆಂದಿದ್ದಾರೆ. ಸ್ವಲ್ಪ ಹೊತ್ತಿನಲ್ಲಿ ಕ್ಲಿಷ್ಟ ಸಮಸ್ಯೆಗಳ ದಶೆ ಪ್ರಾರಂಭವಾಗುತ್ತ ದೆಂದು ಕೂಡಾ ಎಚ್ಚರಿಸಿದ್ದಾರೆ. ಅವರನ್ನು ಶಂಕಿಸುವುದು ಸಂಭಾವ್ಯವಲ್ಲ, ಸಮಂಜಸವೂ ಅಲ್ಲ. ನನ್ನದು ಕುರುಡು ನಂಬುಗೆ ಎಂಬುದನ್ನು ಒಪ್ಪಲಾರೆನು'' ಎಂದನು ರಾಜ. ಸಭೆಯಲ್ಲಿ ಒಂದು ನಿಮಿಷ ಮೌನ ಕವಿಯಿತು. ಆಮೇಲೆ ಸೇನಾಧಿಪತಿ ಉಗ್ರಸೇನನು,

"ಯಾರು ಆ ಜಗತ್ಪತ್ಯಾಚಾರ್ಯ?'' ಎಂದು ಕೇಳಿದನು.

"ಪ್ರಧಾನ ಜ್ಯೋತಿಷಾಚಾರ್ಯರ ಅಚ್ಚು ಮೆಚ್ಚಿನ ಮಿತ್ರರು. ಅವರು ಕೂಡಾ ದೊಡ್ಡ ಜ್ಯೋತಿಷಾಚಾರ್ಯರು. ವಾಚಸ್ಪತ್ಯಾಚಾರ್ಯ ರಿಗಿಂತಲೂ ದೊಡ್ಡ ಜ್ಯೋತಿಷ್ಯರು. ವಾಚಸ್ಪತಾ ಚಾರ್ಯರು ಮುಖ್ಯ ವಿಷಯಗಳಲ್ಲಿ ಅವರ ಹತ್ತಿರ ಚರ್ಚಿಸುವರು.'' ಎಂದನು ಮಹಾರಾಜ.

ಯುವರಾಣಿ ಅದೃಶ್ಯವಾದ ಸಂಗತಿಯನ್ನು ಡಂಗುರದ ಮೂಲಕ ಪ್ರಜೆಗಳಿಗೆಲ್ಲಾ ತಿಳಿಸ ಬೇಕೆಂದು ನಿರ್ಣಯವಾದ ಮೇಲೆ ಸಭೆ ಮುಗಿಯಿತು.

ಡಂಗುರವನ್ನು ಕೇಳಿ ಪ್ರಜೆಗಳು ದಿಗ್ಭ್ರಾಂತ ರಾದರು. ನಗರದ ಪೌರರು ಅಲ್ಲಲ್ಲಿ ಗುಂಪು

ಗುಂಪಾಗಿ ಕೂಡಿ, ಹಲವು ಬಗೆಯಾಗಿ ಮಾತಾಡುತ್ತಾರೆ.

"ಯುವರಾಣಿಯನ್ನು ಅಪಹರಿಸುವಂತಹ ಪರಮ ನೀಚರು ನಮ್ಮ ರಾಜ್ಯದಲ್ಲಿರುವರಾ!" ಎಂದಳೊಬ್ಬಳು ವೃದ್ಧೆ.

"ಸರೋವರವನ್ನು ಆನಿಸಿಕೊಂಡಿರುವ ಗುಡ್ಡದ ಗುಹೆಗಳೆಲ್ಲಾ ಅಂಗೈ ಗೆರೆಗಳ ಹಾಗೆ ನನಗೆ ಸ್ಪಷ್ಟವಾಗಿ ಗೊತ್ತಿದೆ. ಈಗಲೇ ನಾನು ಯುವರಾಣಿಯನ್ನು ಹುಡುಕಲು ಹೊರಡುತ್ತೇನೆ" ಎಂದನು ಗುಂಪಿನಲ್ಲಿದ್ದೊಬ್ಬ ಯುವಕ.

ಇಷ್ಟರಲ್ಲಿ ಯುವರಾಣಿ ಅಪಹರಿಸಲ್ಪಟ್ಟಳೆಂದು ತಿಳಿದ ವಾಚಸ್ಪತ್ಯಾಚಾರ್ಯನು ರಾಜನನ್ನು ನೋಡಿ, "ಪ್ರಭೂ, ನಾನು ಕೇಳಿದ್ದು ನಿಜವೇನು?" ಎಂದು ಕೇಳಿದನು.

"ನಡೆಯಬೇಕಾದ್ದೇನೋ ಹಿಂದಿರುಗಿ ಬಾರದಂತೆ ನಡೆದು ಹೋಯಿತು. ಈಗ ಕುಮಾರಿ ವಿದ್ಯಾವತಿಗೆ ಯಾವ ಅಪಾಯವೂ ಬರಬಾರದು. ಅದಕ್ಕಾಗಿ ನಾವೇನು ಮಾಡಲು ಸಾಧ್ಯವೋ ಅಪ್ಪಣೆ ಕೊಡಿರಿ. ಅವಳ ಕ್ಷೇಮವನ್ನು ಕೋರಿ ಸರೋವರದ ಬಿಡದಿಯ ನಿವಾಸ ಸ್ಥಾನದಲ್ಲಿ ಮಾರ್ಪಾಡು ಸೂಚಿಸಿದವರು ನೀವು. ಅಲ್ಲಿ ನಡೆಯಬಾರದ್ದು ನಡೆದು ಹೋಯಿತು. ಅವಳೀಗ ಎಲ್ಲಿದ್ದಾಳೆಂದು ಕಂಡು ಹಿಡಿಯುವ ಮಾರ್ಗ ಕೂಡಾ ನೀವೇ ತೋರಿಸಬೇಕು" ಎಂದನು ರಾಜ ಗಾಂಭೀರ್ಯ ಭಾವದಿಂದ ವಾಚಸ್ಪತ್ಯಾಚಾರ್ಯನೊಂದಿಗೆ.

"ವಿದ್ಯಾವತಿ ತುಂಬಾ ಸುಕುಮಾರಿ. ಅವಳೀಗ ಎಲ್ಲಿರುವಳೋ ಏನೋ?" ಎಂದಳು ಮಹಾರಾಣಿ ಗದ್ಗದ ಸ್ವರದಲ್ಲಿ.

ವಾಚಸ್ಪತ್ಯಾಚಾರ್ಯನು ಒಂದು ನಿಮಿಷ



ಏನೂ ಹೇಳಲಾಗದೆ, ಮೌನವಾಗಿದ್ದನು. ಆಮೇಲೆ ರಾಜದಂಪತಿಗಳನ್ನು ಸಮಾಧಾನಪಡಿಸುತ್ತಾ, "ಚಿಂತಿಸಬೇಡಿ, ಮಹಾರಾಜಾ, ಯುವರಾಣಿಗೆ ಯಾವ ಅಪಾಯವೂ ಬಾರದು. ಪೂರ್ಣಚಂದ್ರನಿಗೆ ಎಂದೋ ಒಂದು ಸಾರಿ ಹಿಡಿಯುವ ಗ್ರಹಣದಂತಹುದೇ ಇದು. ನಾನು ಈಗಲೇ ಹೋಗಿ ಅವಳ ಜಾತಕ ಪರಿಶೀಲಿಸಿ ನೋಡಿ, ಅವಳೀಗ ಯಾವ ಗ್ರಹ ದಶೆಯಲ್ಲಿರುವಳೆಂದು ತಿಳಿದು ನಿಮಗೆ ಹೇಳುತ್ತೇನೆ" ಎಂದು ಹೇಳಿ ಅಲ್ಲಿಂದ ಹೊರಟು ಹೋದನು. ಈ ಮಾತುಗಳನ್ನು ಕೇಳಿ ಹೊಸ ಯುವಕನು "ಮಹಾರಾಜರಿಗೆ ಇಷ್ಟೊಂದು ಕುರುಡು ನಂಬಿಕೆ ಇರಬಾರದಪ್ಪ!" ಎಂದು ತನಗೆ ತಾನೇ ಹೇಳಿಕೊಂಡನು.

ಮನೆಗೆ ಹೊರಟ ವಾಚಸ್ಪತ್ಯಾಚಾರ್ಯನು



ವಿದ್ಯಾವತಿಯ ಜಾತಕವನ್ನು ತನ್ನ ಮುಂದಿಟ್ಟು ಕೊಂಡು, ದೀಕ್ಷೆಯಿಂದ ಪರಿಶೀಲಿಸುತ್ತಿದ್ದನು. ಬೇರೆ ಯಾವುದೋ ತಾಲಪತ್ರದ ಗ್ರಂಥಗಳನ್ನು ಕೂಡಾ ಶ್ರದ್ಧೆಯಿಂದ ಪರಿಶೀಲಿಸತೊಡಗಿದನು. ಎಷ್ಟು ಹೊತ್ತಾದರೂ ವಾಚಸ್ಪತಾಚಾರ್ಯನು ಆಶ್ಚರ್ಯದಿಂದ ನಿಶ್ಚೇತನಾವಸ್ಥೆಯಲ್ಲೇ ಇದ್ದನು. ಯುವರಾಣಿ ಇದ್ದಕ್ಕಿದ್ದ ಹಾಗೆ ನಿಃಶಕ್ತಳಾಗಿ ಹೋಗುವುದೂ, ಅದಕ್ಕೆ ತಾನು ಸೂಚಿಸಿದ ನಿವಾರಣೋಪಾಯವೂ, ಆ ವಿಷಯದಲ್ಲಿ ತಾನು ಜಗತ್ಪತಿಯೊಂದಿಗೆ ಚರ್ಚಿಸಿದ್ದು ಮೊದ ಲಾದ ವಿಷಯಗಳು ವಾಚಸ್ಪತಿಯ ಮನಸ್ಸಿನಲ್ಲಿ ಕದಲಾಡತೊಡಗಿದವು.

ಜಗತ್ಪತಿ ರಾಜವಂಶಕ್ಕೆ ಸೇರಿದವನು. ಜಗತ್ಪತಿಯ ಪಿತಾಮಹನು ಕೈಲಾಸಪತಿ- ಹಿಮಗಿರಿಯ ರಾಜನಾಗುವೆನೆಂದುಕೊಂಡು ಕನಸು ಕಂಡನು. ಆದರೆ ತ್ರಿಲೋಕಪತಿಯ ಮರಣಾನಂತರ ಅವನ ಸಹೋದರಿಯ ಕುಮಾರ ಉಮಾಪತಿ ಹಿಮಗಿರಿ ರಾಜ್ಯಾಧಿಕಾರವನ್ನು ಕೈ ಹಿಡಿದನು. ಕೈಲಾಸಪತಿ ರಾಜ್ಯ ಭ್ರಷ್ಟನಾಗಿ ಅರಣ್ಯದ ಪಾಲಾದನು. ಹೀಗೆ ಅನ್ವೇಷಿಸುವು ದರಿಂದ, ಅವನಿಗೆ ಕ್ರಮವಾಗಿ ಜ್ಯೋತಿಷ್ಯದ ಮೇಲೆ ಆಸಕ್ತಿಯುಂಟಾಯಿತು. ದೇಶ ದೇಶಗಳಲ್ಲಿರುವ ಬಗೆ ಬಗೆಯ ಜ್ಯೋತಿಷ್ಕರನ್ನು ಸಂದರ್ಶಿಸುತ್ತ, ಮಾನವ ಜೀವನದಲ್ಲಿ ವಿಧಿ ಯಿಂದಾಗಿ ಬರುವ ಮಾರ್ಪಾಡುಗಳನ್ನು ಕುರಿತು ತಿಳಿದುಕೊಳುತ್ತ ರಾಜ್ಯಭ್ರಷ್ಟನಾದ ಕೈಲಾಸಪತಿ ಕಾಲ ಕಳೆದನು. ಕೈಲಾಸಪತಿಯ ಕುಮಾರ ಗಜಪತಿ ಕೂಡಾ ಜ್ಯೋತಿಷ್ಯದ ಮೇಲೆ ಆಸಕ್ತಿ ತೋರಿಸಿ ದನು. ಅವನು ತನ್ನ ಕುಮಾರ ಜಗತ್ಪತಿಗೆ ಜ್ಯೋತಿಷ ಶಾಸ್ತ್ರದೊಂದಿಗೆ ತಾನು ಪುರಾತನ ಗ್ರಂಥಗಳಿಂದ ಕಲಿತ ಆಟವಿಕ ಜಾತಿಯವರ ಮಂತ್ರ ತಂತ್ರಗಳನ್ನೂ ಮಾಯಾಜಾಲವನ್ನೂ ಕಲಿಸಿದನು.

ರಾಜ್ಯ ಭ್ರಷ್ಟರಾದ ತಂದೆ ತಾತಂದಿರು ಅರಣ್ಯ ಮಧ್ಯದಲ್ಲಿ ನಿರ್ಮಿಸಿಕೊಂಡ ಭವನ ವನ್ನು ಮತ್ತಿಷ್ಟು ಬ್ರಹ್ಮಾಂಡವಾಗುವಂತೆ ನಿರ್ಮಾಣ ಮಾಡಿದರು. ಅಲ್ಲಿ ಏಕಾಂತವಾಗಿ ಮಂತ್ರ ತಂತ್ರ, ಮಾಯಾಜಾಲಗಳಿಂದ, ಮಾರಣ ವಿದ್ಯೆಗಳಿಂದ ರಾತ್ರಿ, ಹಗಲೂ ಕೆಲಸ ಮಾಡುತ್ತ ಪ್ರಾವೀಣ್ಯತೆಗಳನ್ನು ಹೆಚ್ಚಿಸಿಕೊಳ್ಳ ತೊಡಗಿದರು.

ಜಗತ್ಪತಿ ಜ್ಯೋತಿಷ್ಯ ಮತ್ತು ಮಂತ್ರ ತಂತ್ರ ಗಳಿಂದ ಮಾತ್ರ ತೃಪ್ತನಾಗಲಿಲ್ಲ. ಕಾಲವು ಕೂಡಿ ಬಂದರೆ ಹಿಮಗಿರಿ ರಾಜ್ಯಕ್ಕಲ್ಲದಿದ್ದರೂ ಬೇರೆ ಯಾವ ರಾಜ್ಯಕ್ಕಾದರೂ ಎಂದೋ ಒಂದು ದಿನ



ಪ್ರಾಂತ್ಯವನ್ನು ಪರೀಕ್ಷಿಸಿ ನೋಡಿದನು. ದೋಣಿಯ ರೇವಿಗೆ ದೂರದಲ್ಲಿರುವ ವನ ಪ್ರಾಂತ್ಯದಲ್ಲಿ ಕಾಲ್ನಡಿಗೆಯ ಸಣ್ಣ ದಾರಿ ಇರುವುದನ್ನು ನೋಡಿದನು. ರಹಸ್ಯವಾಗಿ ಅಲ್ಲಿಗೆ ಒಂದು ದೋಣಿಯನ್ನು ಕೂಡಾ ಏರ್ಪಾಟು ಮಾಡಿದನು.

ಬಿಡದಿ ಭವನದಲ್ಲಿರುವ ಯುವರಾಣಿಯನ್ನು ರಹಸ್ಯವಾಗಿ ಅರಣ್ಯ ಮಧ್ಯದಲ್ಲಿದ್ದ ಮಾಯಾಭವನಕ್ಕೆ ಸಾಗಿಸಿಕೊಂಡು ಹೋಗಿ, ಅಲ್ಲಿಯೇ ಅಡಗಿಸಿಟ್ಟು, ಗ್ರಹಸ್ಥಿತಿ ಒಳ್ಳೆಯದಾದ ಮೇಲೆ ಏನೂ ತಿಳಿಯದವನಂತೆ ತಾನೇ ಅವಳನ್ನು ಕರೆದೊಯ್ದು ರಾಜನಿಗೆ ಒಪ್ಪಿಸಿಬಿಟ್ಟರೆ, ರಾಜ ದಂಪತಿಗಳು ಪರಮಾನಂದ ಭರಿತರಾಗಿ ಹೋಗುತ್ತಾರೆ. ಕೃತಜ್ಞತಾ ಭಾವದಿಂದ ಅವರು ಯುವರಾಣಿಯನ್ನು ತನಗೆ ಕೊಟ್ಟು ವಿವಾಹ ಮಾಡಬಹುದು! ಜಗತ್ಪತಿ ಹೀಗೆ ಆಲೋಚಿಸಿ ತನ್ನ ಪಥಕಕ್ಕೆ ವಿಜಯ ರೂಪ ಕೊಡಲು ಕಾರ್ಯರಂಗಕ್ಕೆ ಇಳಿದಿದ್ದಾನೆ!

ಈ ನಿಜವನ್ನು ಮನಗಂಡುಕೊಳ್ಳದಿದ್ದ ವಾಚಸ್ಪತಾರ್ಯನು ಒಂದು ನಿರ್ಧಾರಕ್ಕೆ ಬಂದು ರಾಜನ ದರ್ಶನಕ್ಕೆ ಹೋದನು.

ಅಲ್ಲಿಗೆ ಹೋದಾಗ ಸೇನಾನಾಯಕ ಉಗ್ರಸೇನನು ಯುವರಾಣಿಯನ್ನು ಹುಡುಕಲಿಕ್ಕೆ ಭಟರನ್ನು ಕಳಿಸಿದ ವಿವರಗಳನ್ನೆಲ್ಲಾ ರಾಜನಿಗೆ ವಿವರಿಸಿ ಹೇಳಿಕೊಂಡಿದ್ದನು. ವಾಚಸ್ಪತಿಯನ್ನು ನೋಡಿದ ಕೂಡಲೇ ರಾಜನು "ವಿದ್ಯಾವತಿ ಕ್ಷೇಮವಾಗಿದ್ದಾಳೆ ತಾನೇ?" ಎಂದು ಕೇಳಿದನು.

"ಅವಳ ಕ್ಷೇಮದ ವಿಷಯದಲ್ಲಿ ನಿಮಗೆ ಅಣು ಮಾತ್ರವೂ ಅನುಮಾನ ಬೇಡ. ಯುವರಾಣಿ ಸುರಕ್ಷಿತವಾಗಿರುತ್ತಾಳೆ. ಅವಳ ಪ್ರಾಣಕ್ಕೆ

ತಾನು ರಾಜನಾಗದೆ ಹೋದೇನಾ ಎಂಬ ಆಶೆಯಿಂದ ರಾಜ್ಯಾಂಗವನ್ನು ಕುರಿತು ಕೂಡಾ ಅಭ್ಯಾಸ ಮಾಡತೊಡಗಿದ್ದಾನೆ. ಅವನು ಕನಸು ಕಂಡುದಕ್ಕೆ ಅವಕಾಶವೀಗ ತಾನಾಗಿ ಬಂದು ಬಾಗಿಲು ತಟ್ಟುವಂತೆ ಭಾವಿಸಿದನು ಜಗತ್ಪತಿ!

ವೀರಗಿರಿ ರಾಜನ ಏಕೈಕ ಕುಮಾರಿ ವಿದ್ಯಾವತಿ ಸರೋವರದ ಬಿಡದಿ ಭವನದಲ್ಲಿ ಒಬ್ಬಂಟಿಗಳಾಗಿದ್ದಾಳೆ! ಈ ಕ್ಲಿಷ್ಟ ದಶೆ ಪೂರ್ತಿಯಾದ ಕೂಡಲೇ ವಿವಾಹ ದಶೆ ಬರುತ್ತದೆಂತಲೂ ತಾನು ರಾಜನೊಂದಿಗೆ ನಂಬುವ ಹಾಗೆ ಹೇಳಿದ್ದೇನೆ. ವಿದ್ಯಾವತಿಯ ವಿವಾಹವು ತನ್ನೊಂದಿಗೆ ಆಗಿ ಬಿಟ್ಟರೆ ವೀರಗಿರಿಯ ಸಿಂಹಾಸನವು ತನ್ನ ವಶಕ್ಕೆ ಬಂದ ಹಾಗೆ ತಾನೇ! ಈ ಆಲೋಚನೆ ಜಗತ್ಪತಿಯನ್ನು ನಿಂತಲ್ಲಿ ನಿಲ್ಲಲು ಬಿಡಲಿಲ್ಲ. ರಹಸ್ಯವಾಗಿ ಹೋಗಿ ಸರೋವರದ ಪರಿಸರ

ಯಾವ ಭಯವೂ ಇಲ್ಲ. ಗ್ರಹಬಲ ಪರೀಕ್ಷಿಸಿ ನೋಡುವಾಗ ಯುವರಾಣಿ ಈ ನಗರಕ್ಕೆ ಪಶ್ಚಿಮ ದಿಕ್ಕಿನಲ್ಲೇ ಇರುವಂತೆ ಕಾಣುತ್ತಾಳೆ. ಅಲ್ಲೆಲ್ಲಾ ಗುಡ್ಡಗಳೂ ಅಡವಿಗಳೂ ಇರುತ್ತವಷ್ಟೇ? ಆದರೂ ನಮ್ಮ ಸೈನಿಕರು ಅಲ್ಲೆಲ್ಲಾ ಹುಡುಕಿದ್ದಾರೆ. ಉತ್ತರ ದಿಶೆಗೆ ಹೋದ ಸೈನಿಕರು ಮಾತ್ರ ಇನ್ನೂ ಬಂದಿಲ್ಲ'' ಎಂದನು ಉಗ್ರಸೇನ.

''ಅವರು ಬರಲಿ. ಆಮೇಲೆ ಇನ್ನಿಷ್ಟು ಸೈನಿಕರನ್ನು ವಾಚಸ್ಪತಾಚಾರ್ಯರ ಸಲಹೆಯ ಪ್ರಕಾರ ಮತ್ತೆ ಕೆಲವು ಮಂದಿ ಸೈನಿಕರನ್ನು ದಕ್ಷಿಣ ದಿಕ್ಕಿಗೆ ಕಳುಹಿಸುತ್ತೇನೆ. ಅದು ಸರಿ. ಈಗ ಯಾರೋ ಮತ್ತೊಬ್ಬ ಯುವಕನು ವಿದ್ಯಾವತಿಯನ್ನು ಹುಡುಕಲು ಅನುಮತಿ ಕೇಳಿದನೆಂದು ಹೇಳಿರುವಿ. ಎಲ್ಲಿ ಆ ಯುವಕ? ಸೈನಿಕರನ್ನು ಕೂಡಾ ತನ್ನೊಂದಿಗೆ ಕಳುಹಿಸುವಂತೆ ಹೇಳುತ್ತಾನೇನು? ಕರೆಯಿರಿ ಅವನನ್ನು'' ಎಂದು ಕೇಳಿದನು ರಾಜ.

''ಇಲ್ಲ ಪ್ರಭೂ. ಅವನು ವಿದ್ಯಾವತಿಯನ್ನು ಹುಡುಕಲಿಕ್ಕೆ ಒಬ್ಬಂಟಿಗನಾಗಿಯೇ ಹೋಗುತ್ತಾನಂತೆ. ಅದರಲ್ಲಿ ಅವನು ವಿಜಯ ಸಾಧಿಸಿದರೆ ಒಳ್ಳೆಯದೇ ಆಯಿತು. ಒಂದು ವೇಳೆ ಆ ಪ್ರಯತ್ನದಲ್ಲಿ ತಾನು ಪ್ರಾಣ ಕಳೆದುಕೊಂಡು ಬಿಟ್ಟರೆ ದಿಕ್ಕಿಲ್ಲದ ವೃದ್ಧೆಯಾದ ತನ್ನ ತಾಯಿಯ ಸಂರಕ್ಷಣೆಯ ಬಾಧ್ಯತೆಗಳನ್ನು ನಾವೇ ನೋಡಿಕೊಳ್ಳಬೇಕೆಂದು ಆ ಯುವಕ ಪ್ರಾರ್ಥಿಸಿಕೊಂಡಿದ್ದಾನೆ ಪ್ರಭುಗಳೇ!

ಆ ಯುವಕನನ್ನು ನೋಡಿದರೆ ಸಾಮಾನ್ಯನ ಹಾಗೆ ಕಾಣುವುದಿಲ್ಲ. ಅವನಿಗೆ ಇದೊಂದು ಅವಕಾಶ ಕೊಡುವುದು ಒಳ್ಳೆಯದೆಂದು ನನ್ನ ಅಭಿಪ್ರಾಯ. ಅದರಲ್ಲಿ ಅವನು ವಿಜಯ ಸಾಧಿಸಿ




ಯಾನೆಂದು ನನ್ನ ಅಂತರ್ಯಕ್ಕೆ ಕಾಣುತ್ತದೆ'' ಎಂದನು ಉಗ್ರಸೇನ.

''ಹಾಗೇನು? ಎಲ್ಲಿ ಆ ಯುವಕ?'' - ಕೇಳಿದನು ರಾಜ.

''ನಮ್ಮ ಕೋಟೆಯ ಬಾಗಿಲ ಮುಂದೆಯೇ ಇದ್ದಾನೆ. ಕರೆಯಿಸಲೇ?'' ಎಂದು ಕೇಳಿದನು ಸೇನಾ ನಾಯಕ ಉಗ್ರಸೇನ.

ಕರೆಯಿಸುವಂತೆ ರಾಜನ ಆಜ್ಞೆಯಾಯಿತು.

ಉಗ್ರಸೇನನು ಆ ಯುವಕನನ್ನು ಕರೆದುಕೊಂಡು ಬರುವಂತೆ ಒಬ್ಬ ಭಟನನ್ನು ಕಳುಹಿಸಿ, ವಾಚಸ್ಪತ್ಯಾಚಾರ್ಯರನ್ನು ನೋಡಿ ''ನೀವೂ ಆ ಯುವಕನನ್ನು ಗಮನಿಸಿರಿ. ನಿಮ್ಮ ಮಿತ್ರ ಜಗತ್ಪತ್ಯಾಚಾರ್ಯನವರನ್ನು ನೀವು ನೋಡಿ ಎಷ್ಟು ದಿನ ಆಯಿತೆಂದಿರಿ?'' ಎಂದು ಕೇಳಿದನು.

ಅವರು ನನ್ನ ಹತ್ತಿರ ಬಂದು ನಾಲ್ಕು ದಿನಗಳಾದುವು. ಮೊದಲು ದಿನಾ ಬರುತ್ತಿದ್ದರು. ಈಗ ಹಾಗಿಲ್ಲದ್ದರಿಂದ ಆಶ್ಚರ್ಯವಾಗಿದೆ. ಬೇರೇನಾದರೂ ಕಾರ್ಯದ ಮೇಲೆ ಮತ್ತೆಲ್ಲಿಗಾದರೂ ಹೋದರೋ ಎಂದು ಕೊಳ್ಳುತ್ತೇನೆ.

"ಹಾಗೆಯೇ ಅವರು ಹೋಗಿದ್ದರೂ ಅವರ ಉದ್ದೇಶ ರಾಜಕುಮಾರಿಯ ಹಿತಚಿಂತನೆಗಾಗಿಯೇ ಎಂದು ನಾನು ನಂಬುತ್ತೇನೆ. ಅವರು ಎಂದಿಗೂ ರಾಜಕುಟುಂಬಕ್ಕೆ ಮೋಸ ಮಾಡುವವರಲ್ಲವೆಂದು ನಾನು ದೃಢವಾಗಿ ನಂಬುತ್ತೇನೆ. ನಿವುಗಳೂ ನಂಬಬೇಕು. ಮಹರಾಜರಿಗೂ ನೀವು ಧೈರ್ಯ ಹೇಳಬೇಕು. ಅವರು ಬಂದ ಕೂಡಲೇ ನಿಮ್ಮ ಹತ್ತಿರ ಕಳುಹಿಸಲೇನು?" ಎಂದನು ವಾಚಸ್ಪತ್ಯಾಚಾರ್ಯ.

"ಬೇಡ, ನಾಲ್ಕು ದಿನಗಳ ಕೆಳಗೆ ನಿಮ್ಮೊಂದಿಗೆ ಜಗತ್ಪತ್ಯಾಚಾರ್ಯರು ಕೂಡಾ ರಾಜನ ದರ್ಶನಕ್ಕೆ ಬಂದರೆಂದು ಮಹಾರಾಜರು ಹೇಳಿದರು. ಈಗ ವಿದ್ಯಾವತಿಯನ್ನು ಕುರಿತು ಏನಾದರೂ ನಿಮ್ಮ ಹತ್ತಿರ ಹೇಳಿದರೇನೋ ತಿಳಿಯೋಣವೆಂದು ಕೇಳಿದೆನು ಅಷ್ಟೆ ಹೊರತು ಬೇರೇನೂ ತಪ್ಪು ತಿಳಿದುಕೊಳ್ಳಬೇಡಿ" ಎಂದನು ಉಗ್ರಸೇನ.

ವಾಚಸ್ಪತ್ಯಾಚಾರ್ಯರು ಎದ್ದು ನಿಂತು ರಾಜನಿಗೆ ನಮಸ್ಕಾರ ಮಾಡಿ, ಅಲ್ಲಿಂದ ಹೊರಡಲು ತಯಾರಾದನು. ಅಷ್ಟರಲ್ಲಿ ಭಟನು ಒಬ್ಬ ಯುವಕನನ್ನು ಕರೆದು ತಂದನು. ಆ ಯುವಕನು ಬರುವುದನ್ನು ನೋಡಿ ವಾಚಸ್ಪತಿ ನಿಂತಲ್ಲೇ ಮುಖವೆತ್ತಿ ನಿಂತನು. ಸುಂದರನಾದ ಆ ಯುವಕನ ಚುರುಕಾದ ಸೂಕ್ಷ್ಮಬುದ್ಧಿ ಮಿಂಚುವ ಕಣ್ಣುಗಳನ್ನು ನೋಡಿ ವಾಚಸ್ಪತ್ಯಾಚಾರ್ಯನು ಆಶ್ಚರ್ಯಪಟ್ಟನು.

ಆಶ್ಚರ್ಯದೊಂದಿಗೆ ಆ ಯುವಕನ ಮುಖತೇಜಸ್ಸನ್ನೂ, ಕಣ್ಣುಗಳ ಕಾಂತಿಯನ್ನೂ, ದೃಢಭಾವನೆಯ ಗಾಂಭೀರ್ಯತೆಯನ್ನೂ ನೋಡುವಾಗ ಅತ್ಯಂತ ಕುತೂಹಲವೆನಿಸಿತು.

ಯುವರಾಣಿಯನ್ನು ಹುಡುಕಲು ಒಬ್ಬನೇ ಹೊರಡಲು ಸಾಹಸ ಮಾಡುವ ಆ ಯುವಕನು ಯಾರಪ್ಪಾ ಎಂದು ಆಲೋಚಿಸುತ್ತ ಅವನು ರಾಜಪ್ರಾಸಾದದ ಹೊರ ಬದಿಗೆ ಬಂದನು.

— (ಇನ್ನೂ ಇದೆ)





# ಮಾಯಾಭವನ

-೫-

(ಸರೋವರ ಬಿಡದಿ ಭವನದಿಂದ ಮಾಯವಾಗಿ ಹೋದ ವೀರಗಿರಿಯ ಯುವ ರಾಣಿ ವಿದ್ಯಾವತಿಯನ್ನು ಹುಡುಕಲು ಮಹಾರಾಜನ ಆಜ್ಞಾನುಸಾರವಾಗಿ ಸೇನಾಧಿಪತಿ ಉಗ್ರಸೇನನು ಭಟರನ್ನು ನಾಲ್ಕು ದಿಕ್ಕುಗಳಿಗೂ ಕಳುಹಿಸಿದನು. ಯುವರಾಣಿಯನ್ನು ಹುಡುಕಲು ಮಹಾರಾಜನ ಅನುಮತಿಯನ್ನು ಕೇಳುತ್ತ ಒಬ್ಬ ಯುವಕನು ರಾಜದರ್ಶನಕ್ಕೆ ಬಂದನು. ಅನಂತರ)

ಭಟರು ರಾಜಭವನದೊಳಗೆ ಕರೆದುಕೊಂಡು ಬಂದ ಯುವಕನು ರಾಜನನ್ನು ನೋಡಿದ ಕೂಡಲೇ ಕೈಗಳನ್ನು ಜೋಡಿಸಿ ಗೌರವದಿಂದ ನಮಸ್ಕಾರ ಮಾಡಿದನು.

ರಾಜನು ಆ ಯುವಕನನ್ನು ನಖಶಿಖ ಪರ್ಯಂತವಾಗಿ ಪರೀಕ್ಷಿಸಿ ನೋಡಿದನು. ಆ ಯುವಕನ ವೇಷಭೂಷಣಗಳೆಲ್ಲಾ ಸಾಧಾರಣವಾಗಿದ್ದರೂ ಅವನ ಕಣ್ಣು ದೃಷ್ಟಿಯಲ್ಲಿರುವ ಅಪೂರ್ವ ಕಾಂತಿಯೂ, ಮುಖಭಾವದಲ್ಲಿ ಪ್ರತಿಬಿಂಬಿಸುವ ರಾಜ ಠೀವಿಯಂತಹ ಗಂಭೀರ ಭಾವವೂ ಎದ್ದು ಕಾಣುತ್ತಿದ್ದವು. ಆ ಯುವಕನ ಸಂಗತಿಯ ಬಗೆಗೆ ಇದಕ್ಕೆ ಮೊದಲು ಸೇನಾಧಿಪತಿ ಹೇಳಿದ ಮಾತುಗಳಲ್ಲಿ ತುಂಬಾ ನಿಜವಿದೆಯೆಂದು ರಾಜನಿಗೆ ತೋರಿತು. ಅವನು ಒಪ್ಪಿಕೊಂಡ ಕೆಲಸವನ್ನು ತತ್‌ಕ್ಷಣವೇ ಮಾಡಿ ಮುಗಿಸುವ ದಿಟ್ಟನೇ ಹೌದೆಂದು ಖಚಿತವಾಯಿತು ರಾಜನಿಗೆ.

ಆಗ ಸೇನಾಪತಿ ಸ್ವಲ್ಪ ಮುಂದೆ ಬಂದು,



"ಈ ಯುವಕನೇ ಯುವರಾಣಿಯನ್ನು ಹುಡುಕಿ ಕರೆದುಕೊಂಡು ಬರಲು ತಮ್ಮ ಅನುಮತಿ ಕೇಳುವನೆಂದು ನಾನು ಹೇಳಿದ್ದು" ಎಂದನು.

ರಾಜನು ಆ ಯುವಕನೊಂದಿಗೆ, "ನಿನ್ನ ಹೆಸರೇನಪ್ಪಾ? ಯಾವ ಊರು? ನಮ್ಮ ಸೈನಿಕರೂ ಎಲ್ಲಾ ದಿಕ್ಕುಗಳಿಗೂ ಹೋಗಿದ್ದಾರೆ. ನೀನು ಒಬ್ಬಂಟಿಗನಾಗಿ ಹುಡುಕಬೇಕೆಂದಿರುವೆಯಂತೆ. ಅದು ನಿನ್ನಿಂದ ಸಾಧ್ಯವಾದೀತೇ? ಒಂದು ವೇಳೆ ನಮ್ಮ ಕುಮಾರಿ ಯುವರಾಣಿಯನ್ನು ನೋಡಿದರೂ ಗುರುತು ಹಿಡಿಯಲು ಸಾಧ್ಯವೇ?" ಎಂದು ಕೇಳಿದನು.

ಯುವಕನು ಕೈಮುಗಿದು, "ಮಹಾರಾಜರೇ ಪ್ರತಿ ವರ್ಷವೂ ನಡೆಯುವ ಯುವರಾಣಿಯ ಜನ್ಮದಿನ ಸಂದರ್ಭದ ಮೆರವಣಿಗೆಯಲ್ಲಿ ನಾನೂ ತಾಯಿಯೂ ಯುವರಾಣಿಯನ್ನು ನೋಡಿರುವುದರಿಂದ ಈಗ ಯುವರಾಣಿಯವರನ್ನು ಸುಲಭವಾಗಿ ಗುರುತು ಹಿಡಿಯಬಲ್ಲೆವು. ಒಂದು ವೇಳೆ ದುಃಖದಿಂದ ಸಂಸ್ಕಾರವಿಲ್ಲದ ತಲೆ, ವಸ್ತ್ರಭೂಷಣಗಳು ಮಲಿನವಾಗಿದ್ದರೂ, ಕೆದರಿದ್ದರೂ, ಕೋಪತಾಪಗಳಿಂದ ಮುಖಭಾವ ಮಾರ್ಪಟ್ಟಿದ್ದರೂ ನಾವು ಗುರುತಿಸಬಲ್ಲೆವು! ಸಂದೇಹಪಡಬೇಡಿ ಮಹಾಪ್ರಭೂ" ಎಂದನು.

"ಅದೆಲ್ಲಾ ಸರಿಯಪ್ಪಾ, ನನ್ನ ಮುಖ್ಯ ಪ್ರಶ್ನೆಗೆ ಉತ್ತರ ಕೊಡಲಿಲ್ಲ. ಇನ್ನೂ ನೀನು ಯಾರೆಂಬ ಸಂಗತಿ ಹೇಳಲೇ ಇಲ್ಲ?" ಎಂದನು ರಾಜ.

"ನನ್ನ ಹೆಸರು ಮಹೇಂದ್ರನಾಥ. ರಾಜಧಾನೀ ನಗರಕ್ಕೆ ಸ್ವಲ್ಪ ದೂರದಲ್ಲಿರುವ ದೇವಿಯ ಆಲಯಕ್ಕೆ ಸಮೀಪದಲ್ಲಿರುವ ಮನೆಯಲ್ಲಿ ನಾನೂ ನನ್ನ ತಾಯಿಯೂ ವಾಸವಾಗಿದ್ದೇವೆ. ತಾಯಿ ವನಾ ಹೂಗಳನ್ನು ಕೊಯಿದು ದೇವಿಯ ಆಲಯಕ್ಕೆ ಸಮರ್ಪಿಸುತ್ತಾ ಇರುತ್ತಾಳೆ. ನನ್ನ ಮೂರು ವರ್ಷದ ವಯಸ್ಸಿನಲ್ಲೇ ತಂದೆ ಕಾಲಗತಿ ಹೊಂದಿದರು. ಆಗಿನಿಂದ ನಮ್ಮ ಲಾಲನೆ ಪಾಲನೆಗಳನ್ನು ನನ್ನ ಚಿಕ್ಕಪ್ಪನವರೇ ನೋಡಿಕೊಳುತ್ತಾರೆ. ಆದರೂ ಚಿಕ್ಕತಾಯಿ ಹಠಾತ್ತಾಗಿ ತೀರಿ ಹೋದುದರಿಂದ ಚಿಕ್ಕಪ್ಪನಿಗೆ ಜೀವನದ ಮೇಲೆ ವಿರಕ್ತಿ ಹುಟ್ಟಿ ನಮ್ಮೆಲ್ಲರನ್ನೂ ಬಿಟ್ಟು ಎಲ್ಲಿಗೋ ಹೋಗಿ ಬಿಟ್ಟರು. ಇದು ನಮ್ಮ ಮೇಲೆ ಬಿದ್ದ ಇನ್ನೊಂದು ದೊಡ್ಡ ಸಿಡಿಲು. ನನಗೆ ಊಹನೆ ತಿಳಿದ ದಿನದಿಂದ ನನ್ನ ಸಂಪಾದನೆಯಿಂದಲೇ ನಾನೂ ನನ್ನ ತಾಯಿಯೂ ಜೀವಿಸಿಕೊಂಡಿದ್ದೇವೆ" ಎಂದನಾಯುವಕ. ರಾಜನು ಬಹಳ ಖೇದಭಾವದಲ್ಲಿ ಸಹಾನುಭೂತಿಯ ನೋಟದಲ್ಲಿ ಅವನ

ಮಾತುಗಳನ್ನು ಆಸಕ್ತಿಯಿಂದ ಆಲಿಸಿದನು.

ರಾಜನು ತಲೆದೂಗುತ್ತ "ಆದರೂ ನೀನು ತಲೆ ಹಾಕಿದ ಕಾರ್ಯವು ಸುಲಭವಾದುದಲ್ಲ. ಎಷ್ಟೋ ಕಷ್ಟ ನಷ್ಟಗಳಿಗೆ ಗುರಿಯಾಗಬೇಕಾಗಿರುತ್ತೆ" ಎಂದನು.




"ನಿಜವೇ ಮಹಾರಾಜರೇ, ಅವನ್ನೆಲ್ಲಾ ಚೆನ್ನಾಗಿ ಆಲೋಚನೆಗೆ ತಂದುಕೊಂಡೇ ಹೊರಡಲು ನಿಶ್ಚಯಿಸಿದ್ದೇನೆ. ನಾನು ಯುವರಾಣಿಯವರನ್ನು ಹುಡುಕುತ್ತಾ ಹೋದರೆ ಹಿಂದುರುಗಿ ಬರಲು ಎಷ್ಟು ದಿನಗಳಾಗುವುದೋ ತಿಳಿಯದು. ಆದಷ್ಟು ಬೇಗ ಬರಲಿಕ್ಕೇ ಪ್ರಯತ್ನಿಸುತ್ತೇನೆ. ಅದರಲ್ಲಿ ಇದಿರಾಗುವ ಕಷ್ಟ ನಷ್ಟಗಳನ್ನು ಕುರಿತು ನನಗೇನೂ ಭಯವಿಲ್ಲ. ಆದರೆ ಅಷ್ಟರವರೆಗೆ ಇಲ್ಲಿ ನನ್ನ ತಾಯಿಯ ಸಂರಕ್ಷಣೆಯ ಬಾಧ್ಯತೆಯನ್ನು ನೋಡಿಕೊಳಲಿಕ್ಕೆ ನನ್ನ ಹೊರತು ಬೇರೆ ದಿಕ್ಕಿಲ್ಲ. ಆದ್ದರಿಂದಲೇ ಮೊದಲೇ ಸೇನಾಧಿಪತಿಯವರೊಂದಿಗೆ ಇದನ್ನು ಹೇಳಿದ್ದೇನೆ" ಎಂದನು ಮಹೇಂದ್ರನಾಥ.

"ಹೌದು" ಸೇನಾನಿ ಆ ವಿಷಯವನ್ನು ನನ್ನೊಂದಿಗೆ ಹೇಳಿದ್ದಾನೆ. ಈ ಸಂಗತಿ ನಾವು ನೋಡಿಕೊಳುತ್ತೇವೆ. ನೀನು ಈ ಕಾರ್ಯದಲ್ಲಿ ವಿಜಯ ಸಾಧಿಸಿಬಿಟ್ಟರೆ ನಿನ್ನನ್ನು ದೊಡ್ಡ ಬಹುಮಾನಗಳಿಂದ ಸತ್ಕರಿಸುತ್ತೇವೆ. ಇನ್ನೇನಾದರೂ ಅಪೇಕ್ಷೆ ಇದ್ದರೆ ಈಗಲೇ ಹೇಳು" ಎಂದನು ಮಹಾರಾಜ,

"ಯಾವ ಬಗೆಯ ಬಹುಮಾನವನ್ನು ಆಶಿಸಿ ನಾನು ಈ ಕೆಲಸಕ್ಕೆ ತಲೆ ಹಾಕಿದ್ದಲ್ಲ ಪ್ರಭೂ. ಇಂತಹ ಕಷ್ಟ ಪರಿಸ್ಥಿತಿಗಳಲ್ಲಿ ಪ್ರಭುಗಳಿಗೆ ಸಹಾಯ ಮಾಡುವುದು ಪ್ರತಿ ಪೌರನಿಗೂ ಕರ್ತವ್ಯ ತಾನೆ? ನನಗೆ ರಾಜಧಾನಿಯ ಸಮೀಪವಿರುವ ಅರಣ್ಯ ಪ್ರಾಂತ್ಯಗಳೆಲ್ಲಾ ಚೆನ್ನಾಗಿ ಗೊತ್ತಿದೆ, ಆದ್ದರಿಂದಲೇ ತಮ್ಮ ಅನುಮತಿ ಕೇಳಲು ಬಂದೆನು" ಎಂದನು ಮಹೇಂದ್ರನಾಥ.

"ಹಾಗೆಯೇ ನಿನ್ನ ಕೋರಿಕೆಗಳನ್ನು ಅಂಗೀಕರಿಸಿಸುತ್ತೇನೆ" ಎಂದು ಹೇಳಿದನು ರಾಜ.

"ನಾಳೆಯೇ ಹೊರಡುತ್ತೇನೆ ಪ್ರಭೂ" ಎಂದು ಇನ್ನೇನೋ ಕೇಳಲಿರುವಂತೆ ಹಿಂದೆ ಮುಂದೆ ನೋಡಿದನು ಮಹೇಂದ್ರನಾಥ.

"ಇನ್ನೇನು?" ಕೇಳಿದನು ರಾಜ.

ಉಗ್ರಸೇನನು ಕೂಡಾ ಏನೆಂಬಂತೆ ಮಹೇಂದ್ರನಾಥನನ್ನು ನೋಡಿದನು.

"ಮಹಾರಾಜರೇ, ನಾನೇನೋ ಯುವರಾಣಿಯವರ ಗುರುತು ಹಿಡಿದು ಬಿಡುತ್ತೇನೆ. ಆದರೆ ತಮ್ಮ ಅನುಮತಿಯಿಂದಲೇ ನಾನು ಅವರನ್ನು



ಹೊರತು ಬೇರೆ ಯಾರಿಗೂ ಗೊತ್ತಿಲ್ಲ. ನೀನು ಯುವರಾಣಿಯನ್ನು ನೋಡಿದಾಗ, ಈ ಮಾತು ಹೇಳಿದರೆ, ನಿನ್ನನ್ನು ನಾವು ಕಳುಹಿಸಿದ್ದೆಂದು ಅವಳು ಗುರುತಿಸಿ ನಂಬುತ್ತಾಳೆ. ಆದರೆ ನೀನು ಈ ಸಂಗತಿ ಇನ್ನೊಬ್ಬರೊಂದಿಗೆ ಹೇಳಿಬಿಡ ಬಾರದು ಜಾಗ್ರತೆ!'' ಎಂದು ಎಚ್ಚರಿಸಿದನು. ಆಮೇಲೆ ''ನಿನ್ನ ತಾಯಿಯ ಸಂರಕ್ಷಣೆಯನ್ನು ಸೇನಾನಿ ನೋಡಿಕೊಳುತ್ತಾನೆ. ಆದ್ದರಿಂದ ನೀನು ನಾಳೆಯೇ ನಿಶ್ಚಿಂತೆಯಿಂದ ಹೊರಡಬಹುದು. ಯುವರಾಣಿಯ ವಿಷಯದಲ್ಲಿ ಶುಭವಾರ್ತೆ ಯೊಂದಿಗೆ ನೀನು ಜಯಪ್ರದವಾಗಿ ಹಿಂದಿ ರುಗಿ ಬರುವುದನ್ನು ನಾವೆಲ್ಲರೂ ಇದಿರು ನೋಡುತ್ತೇವೆ'' ಎಂದು ಹೇಳಿ ರಾಜನು ಎದ್ದು ಅಂತಃಪುರಕ್ಕೆ ಹೋದನು.

''ಸಾಯಂಕಾಲದಲ್ಲಿ ನಿನ್ನ ತಾಯಿಯನ್ನು ಕರೆದುಕೊಂಡು ಬಾ. ಮುಂದಿನ ಏರ್ಪಾಡು ಕುರಿತು ಮಾತಾಡೋಣ'' ಎಂದನು ಸೇನಾಧಿ ಪತಿ. ಮಹೇಂದ್ರನಾಥನು ಮನೆಗೆ ಹೋದಾಗ ಅವನ ತಾಯಿ ದೇವೀ ಪೂಜೆಗೆ ಹೂಮಾಲೆ ಸಿದ್ಧ ಮಾಡಿಕೊಂಡಿದ್ದಳು.

''ಅಮ್ಮಾ, ನಾನು ಮಹಾರಾಜರನ್ನು ದರ್ಶಿಸಿ ಬಂದೆನು'' ಎಂದನು ಮಹೇಂದ್ರನಾಥ.

''ವೀರಸೇನ ಮಹಾರಾಜರನ್ನೋ? ನಿಜ ವಾಗಿಯೂ? ಹೇಗೆ? ರಾಜಾಸ್ಥಾನದಲ್ಲಿ ಉದ್ಯೋಗದಲ್ಲಿ ಸೇರಿದಿಯಾ?' ಎಂದು ನಂಬಲಾಗದವಳಂತೆ ಆನಂದಾಶ್ಚರ್ಯದಿಂದ ಕೇಳಿದಳು ಅವನ ತಾಯಿ.

''ಉದ್ಯೋಗದಲ್ಲಿ ಆಮೇಲೆ ಸೇರುತ್ತೇನೆ. ಈಗ ನಾನು ಯುವರಾಣಿಯನ್ನು ಹುಡುಕಲಿಕ್ಕೆ ಮಹಾರಾಜರು ಒಪ್ಪಿಗೆ ಕೊಟ್ಟರು'' ಎಂದನು

ಹುಡುಕುವೆನೆಂದು ಅವರು ನಂಬುವ ಹಾಗೆ ಮಾಡುವುದು ಹೇಗೆಂದು ತಿಳಿಯದೆ ಆಲೋಚನೆ ಯಾಗಿದೆ'' ಎಂದನು ಮಹೇಂದ್ರನಾಥ.

''ಮಹಾರಾಜರೇ, ಯುವರಾಣಿಯವರಿಗೆ ಗುರುತಿಗಾಗಿ ಏನಾದರೂ ಕೊಟ್ಟು ಕಳಿಸುವುದು ಅಷ್ಟು ಕ್ಷೇಮವಲ್ಲ. ಏಕೆಂದರೆ ಅದು ಮಾರ್ಗ ಮಧ್ಯದಲ್ಲಿ ಎಲ್ಲಿಯಾದರೂ ಕಾಣದೆ ಹೋಗಬಹುದು. ಅದನ್ನು ಯಾರಾ ದರೂ ಕದಿಯಲೂ ಬಹುದು'' ಎಂದನು ಉಗ್ರಸೇನ.

ರಾಜನು ಉಗ್ರಸೇನನನ್ನು ನೋಡಿ ''ನಿಜವೇ, ನನಗೂ ಹಾಗೆಯೇ ಕಾಣುತ್ತದೆ'' ಎಂದು ಮಹೇಂದ್ರನಾಥನ ಕಡೆಗೆ ತಿರುಗಿ ''ಯುವ ರಾಣಿಯ ಬಲಭುಜದ ಮೇಲೆ ಒಂದು ಹುಟ್ಟು ಮಚ್ಚೆ ಇದೆ, ಅದು ನನಗೂ ಮಹಾರಾಣಿಗೂ



ಮಹೇಂದ್ರನಾಥ ಸಂತೋಷದಿಂದ.

"ಯುವರಾಣಿಯನ್ನು ಹುಡುಕಲು ನೀನು ಹೋಗುವಿಯೇನು? ಅವಳನ್ನು ಎಲ್ಲೆಂದು ಹುಡುಕುವಿ? ಒಬ್ಬನೇ ಅರಣ್ಯವಾಸಕ್ಕೆ ಹೋಗುವುದು ಕ್ಷೇಮವೇನೋ ಅಪ್ಪಾ? ಆದರೂ ನೀನು ಹೋದ ಮೇಲೆ ನನ್ನನ್ನು ನೋಡಿಕೊಳ್ಳುವವರು ಯಾರು?" ಎಂದಳು ಚಿಂತೆಯಿಂದ ತಾಯಿ.

"ನೀನೇನೂ ಚಿಂತಿಸ ಬೇಡಮ್ಮಾ ನಾನು ಯುವರಾಣಿಯ ಪತ್ತೆ ಹಚ್ಚಿ ಕ್ಷೇಮವಾಗಿಯೇ ಬಂದು ಬಿಡುತ್ತೇನೆ. ಅದುವರೆಗೆ ನಿನ್ನ ಸಂರಕ್ಷಣೆಯ ಬಾಧ್ಯತೆಯನ್ನೆಲ್ಲಾ ಮಹಾರಾಜರೇ ನೋಡಿಕೊಳ್ಳುವುದಾಗಿ ಹೇಳಿದ್ದಾರೆ. ಈ ದಿನ ಸಾಯಂಕಾಲ ನಾವು ಸೇನಾನಿಯನ್ನು ಕಲೆತುಕೊಂಡರೆ ನಿನ್ನ ಅನುಮಾನಗಳೆಲ್ಲಾ ತೀರಿ ಹೋಗುತ್ತವೆ" ಎಂದು ತಾಯಿಗೆ ಧೈರ್ಯ ಹೇಳಿ ಸಮಾಧಾನಪಡಿಸಿದನು ಮಹೇಂದ್ರನಾಥ.

ಹಾಗೆಯೇ ಸಾಯಂಕಾಲ ತಾಯಿಯೊಂದಿಗೆ ಸೇನಾಧಿಪತಿ ಉಗ್ರಸೇನನ ಮನೆಗೆ ಮಹೇಂದ್ರ ನಾಥನು ಹೋದನು. ಅವನ ತಾಯಿಯನ್ನು ನೋಡಿ ಉಗ್ರಸೇನನು "ಅಮ್ಮಾ, ನಿಮ್ಮ ಕುಮಾರನು ಈ ಕಾರ್ಯದಲ್ಲಿ ವಿಜಯಶಾಲಿ ಯಾಗಿ ರಾಜ ಕುಟುಂಬಕ್ಕೂ ಪ್ರಜೆಗಳಿಗೂ ಆನಂದ ವನ್ನುಂಟು ಮಾಡುವುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಅವನು ಹಿಂದಿರುಗಿ ಬರುವ ವರೆಗೆ ನಿಮ್ಮ ಸಂರಕ್ಷಣೆ ನೋಡಿಕೊಳ್ಳುವ ಬಾಧ್ಯತೆ ನನ್ನದು. ನಿಮಗೆ ರಾಜಭವನ ದಿಂದಲೇ ದಿನಾ ಮೂರು ಹೊತ್ತು ಭೋಜನವು ಬರುತ್ತದೆ. ನಿಮ್ಮ ಜತೆಯಲ್ಲಿದ್ದು, ನಿಮ್ಮ ಅಗತ್ಯಗಳನ್ನು ನೋಡಿಕೊಳ್ಳಲು ಒಬ್ಬ ಸೈನಿಕನ ಹೆಂಡತಿ ಇರುತ್ತಾಳೆ. ಆದ್ದರಿಂದ ನೀವು ನಿಶ್ಚಿಂತೆಯಿಂದ ಇಲ್ಲಿರಬಹುದು. ನಿಮ್ಮ ಕುಮಾರನನ್ನು ತುಂಬು ಹೃದಯದಿಂದ ಆಶೀರ್ವಾದ ಮಾಡಿ ಕಳುಹಿಸಿರಿ" ಎಂದನು.

ಆಮೇಲೆ ಉಗ್ರಸೇನನು ಮಹೇಂದ್ರನಾಥನ ಕಡೆಗೆ ತಿರುಗಿ, "ನಿನ್ನ ತಾಯಿಯ ವಿಷಯದ ಚಿಂತೆ ಇನ್ನು ನಿನಗೆ ಬೇಡ. ಅರಣ್ಯದಲ್ಲಿ ಪಶ್ಚಿಮ ದಿಕ್ಕಿನಿಂದ ಹುಡುಕಲು ಪ್ರಾರಂಭಿಸಿದರೆ ಒಳ್ಳೆಯ ಫಲಿತ ಸಿಗುವುದೆಂದು ವಾಚಸ್ಪತ್ಯಾ ಚಾರ್ಯರು ಹೇಳಿದ್ದಾರೆ. ಆದ್ದರಿಂದ ಆ ವಿಷಯ ವನ್ನು ನೆನಪಿಟ್ಟುಕೋ. ಮಹಾರಾಜರು ಹೇಳಿದ ವಿಷಯ ಕೂಡ ಮರೆತು ಬಿಡಬೇಡ. ನಾಳೆ ಬೆಳಿಗ್ಗೆ ಹೊರಟು ಹೋಗಿ ಕ್ಷೇಮವಾಗಿ ಶುಭ ದೊಂದಿಗೆ ತಿರುಗಿ ಬಾ" ಎಂದನು.

ತಾಯಿ ಮಗಂದಿರು ತೃಪ್ತಿಯಿಂದ ಅಲ್ಲಿಂದ

ತಮ್ಮ ಮನೆಗೆ ಹಿಂದಿರುಗಿದರು. ಮರುದಿನ ಬೆಳಂಜಾಮದಲ್ಲಿ ಮಹೇಂದ್ರನಾಥನು ತಾಯಿಯ ಪಾದಗಳಿಗೆ ನಮಸ್ಕಾರಮಾಡಿ, ಆಶೀರ್ವಾದ ಪಡೆದು, ಅವಳು ಕಟ್ಟಿ ಕೊಟ್ಟ ಅನ್ನದ ಬುತ್ತಿ ಗಂಟು ಎತ್ತಿಕೊಂಡು ಸರೋವರದ ಕಡೆಗೆ ನಡೆದನು. ಸಾರಸ ಭವನದ ನಡುವಿನಲ್ಲಿದ್ದ ಆ ಬಿಡದಿ ಭವನವನ್ನು ಅವನು ಇದುವರೆಗೂ ಹತ್ತಿರ ದಿಂದ ನೋಡಿರಲಿಲ್ಲ. ಆ ಭವನವನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಸರೋವರ ಪ್ರಾಂತ್ಯದ ಪರಿಸರಗಳನ್ನು ಅವನು ಪರೀಕ್ಷಿಸಿ ನೋಡಿದನು. ಚಿಕ್ಕರೇವಿನ ಹತ್ತಿರ ಒಂದು ದೋಣಿ ಇರುವುದು ಕಂಡಿತು. ಆ ದೋಣಿಯ ಸಮೀಪ ದಲ್ಲಿದ್ದ ಮರದಡಿಯಲ್ಲಿ ಕುಳಿತಿದ್ದ ದೋಣಿಗಾರನು ಮಹೇಂದ್ರನಾಥ ನನ್ನು ನೋಡಿದ ಕೂಡಲೇ ಎದ್ದು ನಿಂತು "ಬಾಬಯ್ಯ, ತಾವು ರಾಜಭವನದಿಂದ ಬರುವಿರಾ?" ಎಂದು ವಿನಯದಿಂದ ಕೇಳಿದನು.

"ಹಾಗೇಕೆ ಕೇಳುವಿಯಪ್ಪಾ?" ಎಂದನು ಮಹೇಂದ್ರನಾಥ.

"ಯುವರಾಣಿಯವರನ್ನು ಕುರಿತು ಒಳ್ಳೆಯ ಸುದ್ದಿ ಬರುತ್ತದೇನೋ ಎಂದು ನೋಡುತ್ತಿದ್ದೇನೆ." ಎಂದನು ದೋಣಿಯವನು.

"ಇನ್ನೂ ಯುವರಾಣಿಯ ಜಾಡೇ ಗೊತ್ತಾಗ ದಿರುವಾಗ, ಒಳ್ಳೇ ಸುದ್ದಿ ಹೇಗೆ ಬಂದೀತು? ನಾನೀಗ ಹುಡುಕಲಿಕ್ಕಾಗಿಯೇ ಹೊರಟಿ ದ್ದೇನೆ" ಎಂದನು ಮಹೇಂದ್ರನಾಥ.

"ಹಾಗೇನು! ಬಹಳ ಸಂತೋಷ! ಆದರೆ ಒಂದು ಮಾತ್ರ ನಿಜ; ಆ ದುಷ್ಟರು ಯುವ ರಾಣಿಯನ್ನು ಈ ರೇವಿನ ಮೂಲಕ ಅಪಹರಿಸಿ ಕೊಂಡು ಹೋಗಲಿಲ್ಲ. ಸರೋವರದಿಂದ ಹೋಗಲು ಬೇರೆ ಯಾವುದೋ ಮಾರ್ಗ ವಿರಬೇಕು!" ಎಂದನು ದೋಣಿಗಾರ.

"ಈಗ ನಾನು ಸರೋವರದ ಸುತ್ತಲೂ ತಿರುಗಿ ಬೇರೇನಾದರೂ ದಾರಿಯುಂಟೋ ನೋಡುತ್ತೇನೆ. ಅರಣ್ಯದಲ್ಲೇನಾದರೂ ಮಾರ್ಗ ವಿರುವಂತೆ ಗೊತ್ತಾದರೆ ಆ ದಾರಿಯ ಮೂಲಕ ನನ್ನ ಪ್ರಯಾಣ ಸಾಗಿಸುತ್ತೇನೆ" ಎಂದು ಅಲ್ಲಿಂದ ಹೊರಟನು ಮಹೇಂದ್ರನಾಥ.

"ನಿಮ್ಮ ಪ್ರಯಾಣ ಗೆಲ್ಲುವಂತಾಗ ಬೇಕೆಂದು ಅಪೇಕ್ಷಿಸುತ್ತೇನೆ ಬಾಬಯ್ಯ! ಹೋಗಿ ಬನ್ನಿ!" ಎಂದನು ಆ ದೋಣಿಯವನು. —

(ಇನ್ನೂ ಇದೆ)





# ಮಾಯಾಭವನ

## 6

[ವೀರಗಿರಿಯ ಯುವರಾಣಿ ವಿದ್ಯಾವತಿಯನ್ನು ಸಾರಸ ಸರೋವರದ ಬಿಡದಿ ಭವನದಿಂದ ಅರಣ್ಯ ಮಧ್ಯದಲ್ಲಿರುವ ಮಾಯಾಭವನಕ್ಕೆ ಯಾರೋ ರಹಸ್ಯವಾಗಿ ಸಾಗಿಸಿಕೊಂಡು ಹೋದರು. ಯುವರಾಣಿಯನ್ನು ಹುಡುಕಲಿಕ್ಕೆ ಮಹೇಂದ್ರನಾಥನೆಂಬ ಯುವಕನು ವೀರಸೇನನ ಅನುಮತಿ ಪಡೆದು ಹೊರಟನು. ಅರಣ್ಯದ ಮಾಯಾಭವನದಲ್ಲಿ ಯುವರಾಣಿ ವಿದ್ಯಾವತಿಗೆ ಎಲ್ಲವೂ ಬಹಳ ವಿಚಿತ್ರವಾಗಿ ಕಾಣಿಸುತ್ತಿತ್ತು. ಹೇಗೆಂದರೆ....]

ಮಾಯಾಭವನದಲ್ಲಿ ವೃದ್ಧ ಪರಿಚಾರಿಕೆ ಕಮಲೆಯನ್ನು ಹೋಲುವಂತಹ ಇನ್ನೊಬ್ಬಳು ಹೇಳುವ ಹಾಗೆ ಮಾಡಲೇಬೇಕಾಗಿತ್ತು ವಿದ್ಯಾವತಿಗೆ. ಹಾಗೆ ಅವಳು ತೋರಿಸಿದ ಒಂದು ತಲ್ಪದಲ್ಲಿ ಮಲಗಿ ಕಣ್ಣುಮುಚ್ಚಿದಳು ಯುವರಾಣಿ. ಆದರೆ ತಲೆಯಲ್ಲಿ ಚಿಂತೆ ತುಂಬಿರುವಾಗ ನಿದ್ದೆ ಹೇಗೆ ಬಂದೀತು? ನಿದ್ದೆ ಬಂದಂತೆ ಕಾಣದಿದ್ದರೆ, ಈ ಕೃತಕ ಕಮಲೆಯ ಉಪಚಾರಗಳ ಉಪದ್ರ! ಇದು ದೊಡ್ಡ ಸಂಕಟ. ಆದರೂ ಬದುಕಿರುವವರೆಗೆ ಧೈರ್ಯ ಬಿಡಬಾರದೆಂದು ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡಳು ಆ ಕ್ಷಾತ್ರ ಕನ್ಯೆ.

ತನ್ನ ತಂದೆ ಹಠಾತ್ತಾಗಿ ರೋಗದಲ್ಲಿ ಬಿದ್ದಿರುವರೆಂದು ಹೇಳಿ ಮೋಸದಿಂದ ತನ್ನನ್ನು ಅಪಹರಿಸಿ ತಂದ ದುಷ್ಟರು ಯಾರಾಗಿದ್ದಾರು? ಯಾರು ತನ್ನ ತಂದೆಗಿರುವ ಆ ಶತ್ರುಗಳು? ಪ್ರಜೆಗಳನ್ನು ತನ್ನ ಮಕ್ಕಳ ಹಾಗೆ ಭಾವಿಸುತ್ತ ನೆರೆಹೊರೆಯ ರಾಜ್ಯಗಳೊಂದಿಗೆ ಒಳ್ಳೆಯ ಸ್ನೇಹ ಸಂಬಂಧದಲ್ಲಿರುವ, ಅಜಾತ ಶತ್ರುಗಳಾಗಿರುವ ತನ್ನ ತಂದೆಗೆ ಶತ್ರುಗಳೇ ಇಲ್ಲವಲ್ಲಾ? ಈ ವಿಪತ್ಕರ ಪರಿಸ್ಥಿತಿಯನ್ನು ಧೈರ್ಯದಿಂದ ಇದಿರಿಸಿ ಹೇಗಾ



ದರೂ ಈ ಮಾಯಾ ಭವನದಿಂದ ಹೊರಬಿದ್ದು ತಾಯಿತಂದೆಯರನ್ನು ಸೇರಿಕೊಳ್ಳಬೇಕು. ಹೀಗೆಯೇ ಆಲೋಚಿಸುತ್ತಾ ಬಹಳ ರಾತ್ರಿ ಕಳೆದ ಮೇಲೆ ವಿದ್ಯಾವತಿಗೆ ತಿಳಿಯದಂತೆಯೇ ನಿದ್ದೆ ಬಂದಿತು.

ಪರಿಚಾರಿಕೆ ವೃದ್ಧ ಕಮಲೆಯ ಹಾಗಿದ್ದವಳು ಮೃದುವಾಗಿ ತಟ್ಟಿ ಎಬ್ಬಿಸಿದುದರಿಂದ ಯುವರಾಣಿ ಕಣ್ಣು ಬಿಡಿಸಿ ಸುತ್ತಮುತ್ತಲೂ ನೋಡಿದಳು. ಕೋಣೆಯೊಳಗೆ ಸೂರ್ಯ ಕಿರಣ ನೀರ್ಬಿಸಿಲಾಗಿ ಹರಿದು ಬರುತ್ತಿತ್ತು. ನಿದ್ದೆಯಲ್ಲಿ ಕಂಡ ಸ್ವಪ್ನವು ಇನ್ನೂ ಬಿಡಲಿಲ್ಲವೇನೋ ಎಂಬ ಸಂಶಯದಿಂದ ಬೆರಳು ಕಚ್ಚಿದಾಗ ಬೆಳಗಾಗಿ ಬಹಳ ಹೊತ್ತಾದುದು ಗೊತ್ತಾಯಿತು ಅವಳಿಗೆ.

"ಬಹಳ ಸುಖವಾಗಿ ನಿದ್ದೆ ಬಂತಲ್ಲವೇ?" ಎಂದು ಕೇಳಿದಳು ಕೃತಕ ಕಮಲೆ.

ವಿದ್ಯಾವತಿ ಹೌದೆಂದು ಗೋಣಾಡಿಸಿ ಎದ್ದು ಕುಳಿತು "ಮುಖ ತೊಳೆದು ಹಲ್ಲುಜ್ಜಿ ಸ್ನಾನ ಮಾಡಬೇಕು. ಆಮೇಲಷ್ಟೇ ಜಡತನ ಹೋಗಿ ಚುರುಕು ಬರುತ್ತೆ" ಎಂದಳು.

"ಎಲ್ಲಾ ತಯಾರಾಗಿದೆ, ಅದೇ ಸ್ನಾನದ ಕೋಣೆ" ಎಂದು ಸ್ನಾನದ ಕೋಣೆ ತೋರಿಸಿದಳು ಕೃತಕ ವೃದ್ಧೆ ಕಮಲೆ.

ಯುವರಾಣಿ ಕೋಣೆಯೊಳಗೆ ಹೋಗಿ ಬಾಯಿ ಮುಖ ತೊಳೆದು ಸ್ನಾನ ಮಾಡಿದಳು. ಪಕ್ಕದಲ್ಲಿದ್ದ ಸಣ್ಣ ಕೋಣೆಯಲ್ಲಿ ತನಗಾಗಿ ಮಡಿಕೆ ಮಾಡಿಟ್ಟಿದ್ದ ಬಟ್ಟೆಗಳನ್ನು ನೋಡಿ ಆಶ್ಚರ್ಯ ಪಡುತ್ತ, ಅವುಗಳನ್ನು ಧರಿಸಿ ಹೊರಗೆ ಬಂದಳು.

ಅಲ್ಲಿ ತನ್ನಷ್ಟೇ ವಯಸ್ಸಿನ ಇಬ್ಬರು ಯುವತಿಯರು ತಾನು ಉಟ್ಟು ತೊಟ್ಟಿರುವ ದುಸ್ತುಗಳಂಥವನ್ನೇ ಧರಿಸಿಕೊಂಡು ನಿಂತಿರುವುದನ್ನು ನೋಡಿ ವಿದ್ಯಾವತಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ತಾನು ಕನ್ನಡಿ ಮುಂದೆ ನಿಂತಿಲ್ಲವೆಂದು ದೃಢ ಮಾಡಿಕೊಂಡಳು.

ಕೃತಕ ಕಮಲೆ ಅವರನ್ನು ವಿದ್ಯಾವತಿಗೆ ತೋರಿಸಿ, "ಇವರು ನಿನಗೆ ಬೇಕಾದದ್ದನ್ನೆಲ್ಲಾ ಮಾಡಿಕೊಡುವ ಪರಿಚಾರಿಕೆಯರು. ಇವರ ಹೆಸರು ನೀಲಾ ಮತ್ತು ಮಾಲಾ. ನಿನಗೆ ಏನು ಬೇಕಾದರೂ ಇವರನ್ನು ಕೇಳಬಹುದು, ತಿಳಿಯಿತೇ?" ಎಂದಳು.

"ನೀನೂ ಇಲ್ಲಿಯೇ ಇರುವಿಯಲ್ಲವೇ? ನನ್ನನ್ನು ಬಿಟ್ಟು ಹೋಗುವಿಯಾ?" ಎಂದು ಪ್ರಶ್ನಿಸಿದಳು ವಿದ್ಯಾವತಿ.

"ಆ... ಇದ್ದೇನೆ.. ಇಲ್ಲದೆಯೂ ಇದ್ದೇನು, ನನ್ನದು ಬೇರೆ ವಿಷಯ. ಆ ವಿಷಯ ನಿನಗೆ ಬೇಡ. ಒಂದು ಸಂಗತಿ ನೆನಪಿಟ್ಟುಕೋ. ನೀನು



ನನ್ನನ್ನಾಗಲೀ, ಬೇರೆ ಯಾವ ಪರಿಚಾರಿಕೆಯರನ್ನಾಗಲೀ ಎಂಥಾ ಪ್ರಶ್ನೆಯನ್ನೂ ಕೇಳಬಾರದು. ಇದು ತುಂಬಾ ಮುಖ್ಯ. ಮರೆತರೆ ನಿನಗೇ ಅಪಾಯ! ಮರೆಯಬೇಡ'' ಎಂದು ಎಚ್ಚರಿಕೆ ಹೇಳಿ ಆ ವೃದ್ಧೆ ವೇಗವಾಗಿ ಹೋಗಿಬಿಟ್ಟಳು.

ಬೆಳಗ್ಗಿನ ಅಲ್ಪಾಹಾರ ಮುಗಿದ ಮೇಲೆ ಯುವರಾಣಿ ವಿದ್ಯಾವತಿ ಆ ವಿಶಾಲವಾದ ಕೋಣೆಯಲ್ಲಿ ಕಿಟಕಿಯ ಹತ್ತಿರವಿದ್ದ ಆಸನದಲ್ಲಿ ಕುಳಿತಳು. ಕೋಣೆಯ ಗೋಡೆಗಳಿಗೆ ಅಡಿಯಿಂದ ಮೇಲ್ಛಾವಣಿಯವರೆಗೂ ನಿಲುಗನ್ನಡಿಗಳನ್ನು ಅಳವಡಿಸಲಾಗಿದ್ದಿತು. ಖಾಲೀ ಗೋಡೆ ಕಾಣುತ್ತಿರಲಿಲ್ಲ. ಎರಡು ದೊಡ್ಡ ದೊಡ್ಡ ಕಿಟಕಿಗಳಿಂದ ಹೊರಗಿರುವ ಉದ್ಯಾನವನವು ಬಹು ಸುಂದರವಾಗಿ ಕಾಣುತ್ತಿತ್ತು. ಪರಿಚಾರಿಕೆಯರಿಬ್ಬರೂ ಗೋಡೆಯಲ್ಲಿರುವ ವಸ್ತುಗಳನ್ನೂ, ತೆರೆಗಳನ್ನೂ ಧೂಳು ಒರೆಸಿ ಮಾಸಿದ ಬಣ್ಣಗಳನ್ನೂ ಮತ್ತೆ ಹಚ್ಚಿ ಅಂದಗೊಳಿಸುತ್ತಿದ್ದರು. ಅವರು ಕೋಣೆಯೊಳಗೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುತ್ತಾ ಇರಲು ಕನ್ನಡಿಗಳಲ್ಲಿ ಅವರ ಪ್ರತಿಬಿಂಬಗಳು ಅನೇಕರಿರುವಂತೆ ಭ್ರಮೆಯುಂಟು ಮಾಡುತ್ತಿದ್ದವು. ಪರಿಚಾರಿಕೆಯರು ವೇಷಧಾರಣೆಯಲ್ಲಿ ಮಾತ್ರವೇ ಅಲ್ಲ, ನಡಿಗೆಯಲ್ಲಿ ರೂಪ ರೇಖೆಗಳಲ್ಲಿ ಕೂಡಾ ತನ್ನ ಹಾಗೆಯೇ ಇರುವುದನ್ನು ಗಮನಿಸಿ ಯುವರಾಣಿ ಆಶ್ಚರ್ಯಪಡುತ್ತಿದ್ದಳು. ಈ ನಿಲುಗನ್ನಡಿಗಳ ಅರ್ಥವೇನು? ತನ್ನ ಹಾಗೆಯೇ ಕಾಣುವವರ ಗುಟ್ಟೇನು? ಉತ್ತರ ಹೇಳುವವರಾರು?

ಮಧ್ಯಾಹ್ನದಲ್ಲಿ ಒಬ್ಬಳು ಪರಿಚಾರಿಕೆ ಯುವರಾಣಿಗೆ ಭೋಜನವನ್ನು ತಂದಿಟ್ಟಳು. ಯುವರಾಣಿ ಮೌನವಾಗಿ ಊಟ ಮಾಡಿ, ಅವರು ಹೇಳುವುದಕ್ಕೆ ಮೊದಲೇ ಎದ್ದು ಹೋಗಿ ಹಾಸಿಗೆಯ ಮೇಲೆ ಮಲಗಿದಳು.

ಕೂಡಲೇ ಒಬ್ಬಳು ಪರಿಚಾರಿಕೆ ಮೆಲ್ಲನೆ ಅವಳಿಗೆ ಪನ್ನೀರ್ಚಾಮರದಿಂದ ಗಾಳಿ ಬೀಸಲು ತೊಡಗಿದಳು. ಹಾಗೆ ಸಾಯಂಕಾಲದವರೆಗೂ ಇಬ್ಬರಲ್ಲಿ ಒಬ್ಬಳು ಮಾರಿ ಮಾರಿ ಚಾಮರ ಸೇವೆ ಮಾಡಿದರು ಯುವರಾಣಿಗೆ.

ಸಾಯಂಕಾಲವಾಗಲು ಕೃತಕಳಾದ ವೃದ್ಧ ಕಮಲೆ ಬಂದು, "ಯುವರಾಣೀ, ಏಳು ಬಾ, ಉದ್ಯಾನದಲ್ಲಿ ವಾಹ್ಯಾಳಿಗೆ ಹೋಗೋಣ. ಆ ಸೊಗಸಾದ ಗಾಳಿಯಲ್ಲಿ ತಿರುಗಾಡಿದರೆ ಆರೋಗ್ಯಕ್ಕೆ ಒಳ್ಳೇದು. ಹೊಸ ಜಾಗವೆಂದು ಚಿಂತಿಸಬೇಡ. ಹೊಸ ಉತ್ಸಾಹದಿಂದ ಚಿಂತೆ ಮರೆಯುತ್ತೆ'' ಎಂದಳು.

ಯುವರಾಣಿ ಮೆಲ್ಲನೆ ಎದ್ದು ಅವಳ ಹಿಂದೆ

ಉದ್ಯಾನಕ್ಕೆ ಹೋದಳು.

ಉದ್ಯಾನದಲ್ಲಿ ಅಡವಿಯಿಂದ ಬೀಸುವ ತಂಗಾಳಿ ಹೂಗಳ ಪರಿಮಳಗಳೊಂದಿಗೆ ಸೇರಿ ಸೊಗಸಾಗಿ ಬೀಸುತ್ತಿತ್ತು. ಅವಳ ಹಿಂದೆಯೇ ನಡೆಯುತ್ತಿದ್ದ ಕೃತಕ ಕಮಲೆ ಅವಳನ್ನೇ ನೋಡುತ್ತಾ ಒಂದು ಕಡೆ ಕುಳಿತಳು. ವಿದ್ಯಾವತಿ ಮೆಲ್ಲನೆ ಹಸಿರು ಕಂಬಳಿ ಹಾಸಿದಂತಿದ್ದ ಹಸಿರು ಹುಲ್ಲಿನ ಮೇಲೆ ನಡೆಯುತ್ತ ಉದ್ಯಾನದ ಬಗೆ ಬಗೆಯ ಹೂಗಳನ್ನೂ ಮರಗಳನ್ನೂ ನೋಡುತ್ತ ಸ್ವಲ್ಪ ಹೊತ್ತು ಅಡ್ಡಾಡಿದಳು. ಕತ್ತಲೆ ಬೀಳುವ ಹೊತ್ತಿಗೆ ಮತ್ತೆ ಎಲ್ಲರೂ ಮಾಯಾಭವನವನ್ನು ಸೇರಿ ಕೊಂಡರು.

ಭವನದೊಳಗೆ ಹೊಕ್ಕು ಸ್ವಲ್ಪ ದೂರ ಮುಂದಕ್ಕೆ ಹೋದಾಗ ವಿದ್ಯಾವತಿಗೆ ಕಳೆದ ರಾತ್ರಿ ಮಲಗಿದ ಶಯನಗೃಹವನ್ನು ದಾಟಿ ಬಂದೆನೆಂದು ತೋರಿತು. ವೃದ್ಧಳು ಪಕ್ಕದಲ್ಲಿದ್ದ ಬಾಗಿಲನ್ನು ತೆರೆದಳು. ಇದಿರನಲ್ಲಿ ವಿಶಾಲವಾದ ಕೋಣೆ ಕಾಣಿಸಿತು. ಅಲ್ಲಿಯ ತೆರೆಗಳು ಬೇರೊಂದು ಬಣ್ಣದಲ್ಲಿರುವುದು ಗೊತ್ತಾಯಿತು. ಅವಳು ಊಟ ಮುಗಿಸಿ ಹಾಸಿಗೆ ಯಲ್ಲಿ ಮಲಗಿ ಹಾಯಾಗಿ ನಿದ್ದೆ ಮಾಡಿದಳು.

ಮರುದಿನ ಬೆಳಗಾದ ಕೂಡಲೇ ಅವಳು ಕಿಟಕಿಯ ಮೂಲಕ ಹೊರಗೆ ನೋಡಿದಳು. ಅಲ್ಲಿ ಉದ್ಯಾನವನದ ಬೇರೊಂದು ಭಾಗವು ಕಾಣಿಸಿತು. ಅಲ್ಲಿಯ ಗಿಡಮರ ಹೂಗಳೂ ನಿನ್ನಿನವುಗಳಂತೆ ಇರಲಿಲ್ಲ. ವಿದ್ಯಾವತಿ ಸ್ನಾನದ ಕೋಣೆಗೆ ಹೋಗಿ ಮುಂಚಿನ ದಿನದ ಹಾಗೆ ಆ ವೃದ್ಧ ಪರಿಚಾರಿಕೆ ಕೃತಕ ಕಮಲೆಯೊಂದಿಗೆ ಇಬ್ಬರು ಹೊಸ ಯುವತಿಯಿರುವುದು ಕಂಡಿತು. ಅವಳಿಗೆ ಬೇಕಾದ ದುಸ್ತುಗಳೂ ನಿನ್ನೆಯ ಹಾಗೆಯೇ ಮಡಿಕೆ ಮಾಡಿಡಲ್ಪಟ್ಟಿದ್ದುವು. ಆ ಇಬ್ಬರು




ಪರಿಚಾರಿಕೆಯರು ಕೂಡಾ ಇವತ್ತು ಯುವರಾಣಿ ತೊಟ್ಟಂಥ ದುಸ್ತುಗಳನ್ನೇ ಧರಿಸಿದ್ದಾರೆ. ಅವರು ಅವಳಿಗಳೆಂದು ನೆನೆದಳು ವಿದ್ಯಾವತಿ. ಅವರಲ್ಲಿ ಕೂಡಾ ತನ್ನ ಹೋಲಿಕೆಯಿದ್ದುದಷ್ಟೇ ಅಲ್ಲದೆ ಚಲನವಲನಗಳಲ್ಲಿಯೂ ತನ್ನ ಹಾಗೆಯೇ ಮಾಡು ವುದು ಗೊತ್ತಾಯಿತು ವಿದ್ಯಾವತಿಗೆ.

"ನೋಡು. ಇವಳು ಸುರೇಖೆ, ಇವಳು ಸುಲೇಖೆ. ಇವರಿಬ್ಬರೂ ಈ ದಿನ ನಿನಗೆ ಬೇಕಾದುದನ್ನೆಲ್ಲಾ ಒದಗಿಸುತ್ತಾರೆ.'' ಎಂದು ಹೇಳಿ ವೃದ್ಧಳು ಅಲ್ಲಿಂದ ಹೋಗಿಬಿಟ್ಟಳು.

ವಿದ್ಯಾವತಿ ಒಬ್ಬಳನ್ನು ನೋಡಿ, "ಸುರೇಖಾ, ನಾನೊಂದು ಪ್ರಶ್ನೆ ಕೇಳಲೇ ನಿನ್ನನ್ನು?'' ಎಂದು ಕೇಳಿದಳು.

"ನಾನು ಸುಲೇಖೆ ಯುವರಾಣೀ, ಈಗ ಏನಾದರೂ ಮಾಡಬೇಕೇನು? ಧೈರ್ಯದಿಂದ



ರಾಣಿಯವರೇ! ಯಜಮಾನಿಯವರು ಕೋರುವಷ್ಟು ಕಾಲ ನೀವಿಲ್ಲೇ ಇರುವಿರಿ. ಆಮೇಲೆ ಅವರು ನಿಮ್ಮನ್ನು ಕರೆದುಕೊಂಡು ಹೋಗಬಹುದು. ಆದರೆ ಅದು ಯಾವಾಗ ಎಂಬುದೊಂದೂ ನಮಗೆ ಗೊತ್ತಿಲ್ಲ'' ಎಂದಳು ಸುಲೇಖ.

"ಹಾಗೇನು!'' ಎಂದು ಸುಮ್ಮನಾದಳು ವಿದ್ಯಾವತಿ. ಆಮೇಲೆ ಒಬ್ಬರೊಂದಿಗೊಬ್ಬರು ಏನೂ ಮಾತಾಡಲಿಲ್ಲ.

ಮಧ್ಯಾಹ್ನ ಊಟ ಮುಗಿದ ಮೇಲೆ ವಿದ್ಯಾವತಿ ಭೋಜನ ಭಾರದ ತೂಕಡಿಕೆ ತೀರಿಸಿಕೊಳ್ಳಲು ತಲ್ಪದ ಮೇಲೆ ಒರಗಿದಳು. ಆಗ ದೂರದಲ್ಲಿ ನಿಂತಿದ್ದ ಪರಿಚಾರಿಕೆಯನ್ನು ನೋಡಿ, "ಸುಲೇಖಾ! ಹೀಗೆ ಬಂದು ನನ್ನ ಪಕ್ಕದಲ್ಲಿ ಕುಳಿತುಕೋ. ನಿನ್ನನ್ನೊಂದು ವಿಷಯ ಕೇಳಬೇಕು!'' ಎಂದಳು.

"ಯುವರಾಣೀ! ನಾನು ಸುರೇಖೆ!'' ಎನ್ನುತ್ತಾ ಹತ್ತಿರ ಬಂದು ಕುಳಿತಳು ಆ ಪರಿಚಾರಿಕೆ.

"ಹೌದಾ? ನೀವಿಬ್ಬರೂ ಒಂದೇ ರೂಪದಲ್ಲಿರುವುದರಿಂದ ನನಗೆ ಗೊತ್ತಾಗಲಿಲ್ಲ. ನಿಮ್ಮ ಹೆಸರುಗಳು ತಾರುಮಾರಾಗುತ್ತವೆ. ನೀವಿಬ್ಬರೂ ಅವಳಿ ಜವಳಿಗಳೇ ತಾನೇ?'' ಎಂದಳು ವಿದ್ಯಾವತಿ.

"ಅಲ್ಲ ಯುವರಾಣೀ! ನಾವು ಒಡಹುಟ್ಟಿದವರು ಸಹಾ ಅಲ್ಲ'' ಎಂದಳು ಸುರೇಖೆ.

"ಹಾಗಾದರೆ ಇಲ್ಲಿ ಎಷ್ಟು ಕಾಲದಿಂದ ಇದ್ದೀರಿ?'' ಎಂದು ಕೇಳಿದಳು ವಿದ್ಯಾವತಿ.

"ಒಂದೆರಡು ತಿಂಗಳಿಂದ'' ಎಂದಳು ಸುರೇಖೆ.

"ಇಷ್ಟು ದೊಡ್ಡ ಭವನದಲ್ಲಿ ನೀವಿಬ್ಬರೇ ಇರುವಿರೇನು?'' ಎಂದು ವಿದ್ಯಾವತಿ ಕೇಳಿದಳು.

"ನಿನ್ನೆ ನಿಮ್ಮ ಪರಿಚರ್ಯೆ ಮಾಡಲಿಕ್ಕೆ ಮಾಲಾ ನೀಲಾ ಬಂದರಲ್ಲವೇ? ಇವತ್ತು ನಾವು ಬಂದೆವು. ಹೇಳಿ'' ಎಂದು ಅವಳು ಕೇಳಿದಳು.

"ಏನೂ ಬೇಡ. ನೀನು ಇಲ್ಲಿ ಬಹಳ ಕಾಲದಿಂದ ಇರುವಿಯಾ?'' ಎಂದು ಕೇಳಿದಳು ಯುವ ರಾಣಿ.

"ಇಲ್ಲ ಯುವರಾಣೀ! ಇಲ್ಲಿಗೆ ಬಂದು ಎರಡು ತಿಂಗಳು ಕೂಡಾ ಆಗಿಲ್ಲ'' ಎಂದಳು ಸುಲೇಖ.

"ನಿನ್ನನ್ನು ನೋಡಿದರೆ ನನಗೆ ತುಂಬ ಇಷ್ಟ. ಅದಕ್ಕೆ ಮೊದಲು ಎಲ್ಲಿ ಏನು ಮಾಡಿಕೊಂಡಿದ್ದೀ?'' ಎಂದು ಕೇಳಿದಳು ಯುವರಾಣಿ.

"ಮನೆ ಹತ್ತಿರವೇ ಇದ್ದೆ'' ಎಂದಳವಳು.

"ನಿನ್ನ ಮೇಲೆ ನನಗೆ ತುಂಬಾ ಪ್ರೀತಿ ಬರುತ್ತೆ. ನಾನು ಇಲ್ಲಿಂದ ಹೋಗುವಾಗ ನನ್ನ ಜತೇಲಿ ಬರುವಿಯಾ?'' ಎಂದು ನೇರಾಗೇ ಕೇಳಿದಳು ವಿದ್ಯಾವತಿ.

"ಇದು ಕೂಡಾ ನಿಮ್ಮ ಭವನವೇ ಯುವ

ನಾಳೆ, ನಾಡಿದ್ದು ಆಮೇಲೆ ಕೂಡಾ ಬೇರೆ ಯಾರೋ ಇಬ್ಬರು ಬರುತ್ತಾರೆ. ಅವರೆಲ್ಲರನ್ನೂ ನಾವು ನೋಡಲಿಲ್ಲ. ಅವರ ಹೆಸರು ಕೂಡಾ ನನಗೆ ಗೊತ್ತಿಲ್ಲ'' ಎಂದಳು ಸುರೇಖೆ.

"ಮತ್ತೆ ಇಲ್ಲಿ ಪುರುಷರಾರೂ ಇಲ್ಲವೇ? ನಿನ್ನ ಯಜಮಾನರು ಇದ್ದಾರಷ್ಟೇ?'' ಎಂದು ಕೇಳಿದಳು ವಿದ್ಯಾವತಿ.

"ಇದ್ದಾರಾದರೂ, ಅವರು ದೂರದಲ್ಲಿ ಬೇರೆ ಯಾಗಿಯೇ ಇರುತ್ತಾರೆ. ನಮ್ಮ ನೆರಳಿಗೆ ಬರುವುದಿಲ್ಲ. ಇಷ್ಟರವರೆಗೆ ನಾನು ಇಲ್ಲಿಯ ಯಜಮಾನರನ್ನು ಕೂಡಾ ನೋಡಲಿಲ್ಲ. ಸರಿ ಯುವರಾಣಿಯವರೇ, ನಿಮ್ಮ ನಿದ್ದೆಗೆ ಹೊತ್ತಾಯಿತು'' ಎಂದು ಸುರೇಖೆ ಹಾಸಿಗೆಯನ್ನು ಸರಿ ಮಾಡಿ ಅವಳು ಮಲಗಿದ ಕೂಡಲೇ ಪಟ್ಟೆವಸ್ತ್ರ ಹೊದಿಸಿ, ಹೋಗಿ ಕಿಟಕಿಯ ಹತ್ತಿರವಿದ್ದ ಆಸನದಲ್ಲಿ ಕುಳಿತಳು.

ಸಾಯಂಕಾಲ ವಿದ್ಯಾವತಿ ನಿದ್ದೆಯಿಂದೇಳುವಾಗ, ಅವಳನ್ನು ವಾಹ್ಯಾಳಿಗೆ ಕರೆದುಕೊಂಡು ಹೋಗಲು ಕೃತಕ ಕಮಲೆ ಬಂದಳು. ಆ ದಿನ ವಾಹ್ಯಾಳಿಗೆ ಹೋಗುವಾಗ ಆ ವೃದ್ಧಳ ಹೊರತು ಬೇರೆ ಯಾರೂ ಬರಲಿಲ್ಲ. ಆ ವೃದ್ಧೆ ಕೂಡಾ ವಿದ್ಯಾವತಿಯೊಂದಿಗೆ ತೂಕ ನೋಡಿಕೊಂಡೇ ಮಾತಾಡುತ್ತ, ಆಗತ್ಯ ಮೀರಿ ಒಂದು ಚೂರು ಕೂಡಾ ಮಾತಾಡದ್ದರಿಂದ, ಇವರನ್ನೆಲ್ಲಾ ಹೀಗೆ ಶಾಸಿಸುವವನು ಯಾರೆಂದು ಆಲೋಚಿಸುತ್ತ, ವಿದ್ಯಾವತಿ ಆ ವೃದ್ಧೆಯ ಅನುಸರಣೆಯಲ್ಲಿ ಉದ್ಯಾನವನದಲ್ಲಿ ತಿರುಗಾಡಿ ಕತ್ತಲೆಯಾಗುವಾಗ ಮಾಯಾಭವನಕ್ಕೆ ಹಿಂದಿರುಗಿದಳು. ಈಗ ಆ ಕೃತಕ ವೃದ್ಧೆ ತನ್ನನ್ನು ಬೇರೊಂದು ಕೋಣೆಗೆ ಕರೆದೊಯ್ದುದು ಅವಳಿಗೆ ಸ್ಪಷ್ಟವಾಗಿ ತಿಳಿಯಿತು.

ಮರುದಿನ ಅವಳು ನಿದ್ದೆಯಿಂದೇಳುವಾಗ ಮಾಲಿನಿ ಶಾಲಿನಿ ಎಂಬ ಇಬ್ಬರು ಪರಿಚಾರಿಕಾ ಯುವತಿಯರು ಬಂದರು. ಅವರು ಕೂಡಾ ತಾನು ಧರಿಸಿದ ಬಟ್ಟೆಗಳನ್ನೇ ಧರಿಸಿ ತನ್ನ ಹೋಲಿಕೆಯಲ್ಲೇ ಇದ್ದರು. ತನ್ನನ್ನು ಇಲ್ಲಿಗೆ ಅಪಹರಿಸಿ ತಂದ ದುರ್ಮಾರ್ಗಿಗಳು, ತನ್ನ ಗುರುತನ್ನು ಇನ್ನೊಬ್ಬರಿಂದ ಹಿಡಿಯಲಾಗದಂತೆ ಮಾಡುವ ತಂತ್ರವೇ ಇದೆಂದು ಈಗ ತಿಳಿದಳು ವಿದ್ಯಾವತಿ. ಇದಕ್ಕೆ ತರಣೋಪಾಯವೇನೆಂದು ವಿದ್ಯಾವತಿ ಬಹು ತೀವ್ರವಾಗಿ ಆಲೋಚನೆ ಮಾಡತೊಡಗಿದಳು.

—(ಇನ್ನೂ ಇದೆ)






# ಮಾಯಾಭವನ

೭

[ಮಹೇಂದ್ರನಾಥನೆಂಬ ಯುವಕನು ವೀರಸೇನ ಮಹಾರಾಜನ ಅನುಮತಿಯಿಂದ, ಬಿಡದಿ ಭವನದೊಳಗಿದ್ದ ಯುವರಾಣಿ ವಿದ್ಯಾವತಿಯನ್ನು ಹುಡುಕಲು ಹೊರಟನು. ಅವನು ಮೊದಲು ಸಾರಸಭವನದ ಪರಿಸರಗಳನ್ನು ಪರೀಕ್ಷಿಸಿ, ಅಲ್ಲಿದ್ದ ದೋಣಿಯವನೊಂದಿಗೆ ಮಾತಾಡಿದ ಮೇಲೆ, ಅಲ್ಲಿಂದ ಆ ದೋಣಿಯವನು ಸೂಚಿಸಿದಂತೆ ಅಡವಿಯ ಕಡೆಗೆ ಹೊರಟನು. ಮುಂದೆ–]

ಮಹೇಂದ್ರನಾಥನು ಸಾರಸ ಸರೋವರದ ಪಡುಗಡೆಯ ತೀರದಲ್ಲಿ ಪ್ರತಿ ಅಡಿಗಳನ್ನು ಪರೀಕ್ಷಿಸಿಕೊಂಡು ನಡೆಯುತ್ತ ಅರಣ್ಯದೊಳಗಡೆ ನಡೆಯಲು ತೊಡಗಿದನು. ಅಲ್ಲಲ್ಲಿ ನಿಂತು ಮರಗಳೆಡೆಯಲ್ಲಿ ಕಾಣುವ ಬಿಡದಿ ಭವನವನ್ನೂ ಪರೀಕ್ಷಿಸುತ್ತ, ದಾರಿಯಲ್ಲದ ಆ ಅಡವಿಯಲ್ಲಿ ನಡೆಯುತ್ತಿದ್ದನು. ಏನೇನೋ ಬಳ್ಳಿಗಳೂ, ಮುಳ್ಳುಗಳೂ ಅಡ್ಡಾದಿಡ್ಡಿಯಾಗಿರುವ ಪೊದರುಗಳೂ ಆ ದಾರಿಯಲ್ಲಿ ಹೆಣೆದುಕೊಂಡಿದ್ದುವು.

ಹೀಗೆ ಹೋಗುತ್ತಿರಲು, ಆ ದಿನ ಸೂರ್ಯಾಸ್ತಮಾನವಾದರೂ ಅರಣ್ಯದೊಳಗೊಂದು ಸರಿಯಾದ ದಾರಿ ಮಾತ್ರ ಕಾಣಲಿಲ್ಲ. ರಾತ್ರಿ ಪೂರಾ ಒಂದು ಮರದ ಕೆಳಗೆ ಬಂಡೆಯ ಮೇಲೆ ಕಳೆದನು.

ಬೆಳಗಾದ ಕೂಡಲೇ ಎದ್ದು ಸುತ್ತಲೂ ಪರೀಕ್ಷಿಸಿ ನೋಡಿದನು. ತಾನು ರಾತ್ರಿಯಲ್ಲಿ ಕುಳಿತಿದ್ದ ಬಂಡೆಗೆ ಸ್ವಲ್ಪ ದೂರದಲ್ಲಿ ಸರೋವರ ಜಲಕ್ಕಿಳಿಯುವ ಏರಲಾಗುವ ಸಣ್ಣ ಮೆಟ್ಟಿಲಿರುವುದು ಕಂಡು ಅವನಿಗೆ ಆಶ್ಚರ್ಯವಾಯಿತು.



ಮಹೇಂದ್ರನಾಥನು ಉತ್ಸಾಹದಿಂದ ಆ ಮೆಟ್ಟಿಲನ್ನು ಸಮೀಪಿಸಿದನು. ಮೆಟ್ಟಲು ಸರಿಯಾಗಿ ಕಾಣದಂತೆ ಅವುಗಳ ಮೇಲೆ ಮರದ ಕೊಂಬೆಗಳು ಅಡ್ಡಾದಿಡ್ಡವಾಗಿ ಹಾಕಲ್ಪಟ್ಟಿದ್ದುವು. ಅವುಗಳನ್ನು ಮಹೇಂದ್ರನಾಥನು ತೊಲಗಿಸಿದನು. ಆಗ ಅಡವಿಯೊಳಗೆ ಹೋಗುವ ಸಣ್ಣಗಿನ ದಾರಿ ಕಾಣಬಂತು. ಒತ್ತೊತ್ತಾಗಿ ಹಚ್ಚಗಿನ ಎಲೆಗಳನ್ನು ಹಾಕಿರುವ ಆ ಮಾರ್ಗವು ಹೊಸತಾಗಿ ಏರ್ಪಡಿಸಲ್ಪಟ್ಟುದೆಂದು ಅವನಿಗೆ ಗೊತ್ತಾಯಿತು. ಕ್ಷಾತ್ರತೇಜದೊಂದಿಗೆ ಪ್ರಭು ಭಕ್ತಿ ನಿಷ್ಠೆಗಳು ತುಂಬಿದ ಪುರುಷ ಸಿಂಹನಾದ ಮಹೇಂದ್ರನಾಥನು ಕ್ರೂರ ಮೃಗಗಳು ತನ್ನ ಮೇಲೆ ಬಾರದಂತೆ ತಕ್ಕ ಜಾಗರೂಕತೆಯಿಂದ ಆಯುಧಪಾಣಿಯಾಗಿ ಮುಂದೆ ನಡೆದನು.

ದಾರಿಯ ಇಕ್ಕೆಲಗಳಲ್ಲಿಯೂ ಎತ್ತರವಾದ ಮರಗಳಿದ್ದುದರಿಂದ ಸೂರ್ಯೋದಯವಾಗಿ ಹೊತ್ತು ಮೇಲೆ ಬಂದಿದ್ದರೂ ದಾರಿ ಮಸಕು ಮಸಕಾಗಿಯೇ ಕಾಣುತ್ತಿತ್ತು.

ಹಾಗೆ ಎಷ್ಟೋ ಹೊತ್ತು ನಡೆದು ಮಹೇಂದ್ರನಾಥನು ಖಾಲಿಯಾದ ಒಂದು ಸಾದಾ ಪ್ರದೇಶವನ್ನು ಸೇರಿದನು. ಮಾರ್ಗದ ಒಂದು ಬದಿಯಲ್ಲಿ ಸಣ್ಣ ಕುಟೀರವಿರುವುದು ಕಂಡಿತು. ಅರಣ್ಯದ ಮಧ್ಯದಲ್ಲಿ ಈ ಕುಟೀರವು ಹೇಗೆ ಬಂದಿತೋ ಎಂದು ಆಲೋಚಿಸುತ್ತ ಮಹೇಂದ್ರನಾಥನು ಆ ಕುಟೀರವನ್ನು ಸಮೀಪಿಸಿದನು.

"ಯಾರಿಗಾಗಿ ನೋಡುತ್ತಿರುವಿಯಪ್ಪಾ?" ಎಂಬ ಕಂಠಸ್ವರವು ಕೇಳಬಂದಿತು.

ಮಹೇಂದ್ರನಾಥನು ಕಂಠಸ್ವರ ಕೇಳುವ ದಿಕ್ಕಿಗೆ ತಿರುಗಿದನು. ದೊಡ್ಡದೊಂದು ಪೊದರಿನಾಚೆಗೆ ಒಬ್ಬ ಸನ್ಯಾಸಿ ಗಿಡಗಳಿಗೆ ನೀರು ಹೊಯ್ಯುತ್ತಿರುವುದು ಕಂಡಿತು. ಮಹೇಂದ್ರನಾಥನು ಅವನಿಗೆ ಕೈ ಜೋಡಿಸಿ ನಮಸ್ಕಾರ ಮಾಡಿ, "ನಾನು ಒಂದು ಮುಖ್ಯವಾದ ಕಾರ್ಯವನ್ನು ತಲೇ ಮೇಲೆ ಹಾಕಿಕೊಂಡು ಹೊರಟವನು. ಅಂದುಕೊಳ್ಳದಂತೆ ತಮ್ಮಂತಹ ಮಹನೀಯರ ದರ್ಶನ ಭಾಗ್ಯ ದೊರಕಿತು!" ಎಂದನು.

ಆಜಾನುಬಾಹುವಾದ ಆ ಸನ್ಯಾಸಿಯ ಪ್ರಶಾಂತವಾದ ವದನ ಮಂಡಲವನ್ನು ನೋಡಿ ಮಹೇಂದ್ರನಾಥನು ಒಂದು ಕ್ಷಣ ಬೆರಗಾದನು. ಅವನು ದಯಾರ್ದ್ರ ದೃಷ್ಟಿಯಿಂದ ಮಹೇಂದ್ರನಾಥನನ್ನು ನೋಡುತ್ತ ಮಂದಹಾಸ ಪ್ರದರ್ಶಿಸಿ "ಈಗ ತಾನೇ ಸೂರ್ಯಾಸ್ತಮಾನವಾಗಿದೆ, ನೀನು ಎಲ್ಲಿಗೆ ಹೋಗುವವನಾದರೂ ಈ ರಾತ್ರಿಯನ್ನು ಇಲ್ಲೇ ಕಳೆದು ಬೆಳಗಾದ ಮೇಲೆ ಹೋಗುವುದು ಒಳ್ಳೆಯದು. ಒಳಗೆ ಬಾರಪ್ಪಾ" ಎಂದು ಮಹೇಂದ್ರ



ನಾಥನ ಭುಜ ತಟ್ಟಿ ಕುಟೀರದೊಳಗೆ ಹೋದನು.

ಮಹೇಂದ್ರನಾಥನು ಅವನನ್ನು ಅನುಸರಿಸಿಕೊಂಡು ಹೋದನು. ಇಬ್ಬರೂ ಕುಟೀರದೊಳಗೆ ಹೋದ ಮೇಲೆ ಸನ್ಯಾಸಿ ಒಂದು ಚಾಪೆ ಬಿಡಿಸಿ ಅದರ ಮೇಲೆ ಕುಳಿತನು. ಮಹೇಂದ್ರನಾಥನು ಅವನ ಪಾದದ ಹತ್ತಿರ ವಿನಯ ಮುದ್ರೆಯಲ್ಲಿ ಕೈಕಟ್ಟಿಕೊಂಡು ಕುಳಿತನು.

"ನಾನು ಅನೇಕ ವರ್ಷಗಳವರೆಗೆ ಮನಸ್ಸಿನ ಶಾಂತಿಗಾಗಿ ಎಷ್ಟೋ ದೇಶಗಳನ್ನು ತಿರುಗಿದ್ದೇನೆ. ಕಡೆಗೆ ಇಲ್ಲಿಗೆ ಬಂದು ಸೇರಿದೆನು. ಈ ಪ್ರಾಂತ್ಯಕ್ಕೆ ಬಂದ ಮೇಲೆ ಬೇರೆಲ್ಲಿಗೋ ಹೋಗಬೇಕೆಂದು ಕಾಣುವುದಿಲ್ಲ. ನಾನಿಲ್ಲಿಗೆ ಬಂದ ಮೇಲೆ ನನ್ನನ್ನು ನೋಡಿದ ಮೊದಲ ಶಾಂತ ತೇಜಸ್ವೀ ವ್ಯಕ್ತಿ ಸತ್ಯಸಂಧನಾಗಿ ಕಾಣುವ ನೀನೇ!'' ಎಂದನು ವೀರ ತೇಜಸ್ವಿಯಾದ ಆ ಸನ್ಯಾಸಿ.

ಮಹೇಂದ್ರನಾಥನು ಮೌನವಾಗಿ ಕೇಳುತ್ತ ಅವನ ಪಾದಗಳನ್ನು ಒತ್ತಿಕೊಂಡಿದ್ದನು.

"ಕಂದಾ, ನೀನು ಯಾರೋ? ಯಾವ ಕಾರ್ಯದ ಮೇಲೆ ಹೊರಟು ಬಂದುದೆಂಬುದನ್ನು ಹೇಳಲೇ ಇಲ್ಲ! ಹೇಳುವುದರಿಂದ ಕೆಡುಕಾಗದೆಂಬ ನಂಬುಗೆ ಇದ್ದರೆ ಮಾತ್ರ ಹೇಳು'' ಎಂದು ಕೇಳಿದನು ಸನ್ಯಾಸಿ.

"ಮಹಾತ್ಮರೇ, ತಮ್ಮೊಡನೆ ಸುಳ್ಳು ಹೇಳಲು ಮನಸ್ಸಿಲ್ಲ. ನನ್ನ ಕಾರ್ಯ ರಹಸ್ಯದ್ದಾದರೂ ನಿಮ್ಮ ಮುಖವು ಸತ್ಯವನ್ನೇ ಹೇಳಿಸುತ್ತದೆ. ನನ್ನ ಹೆಸರು ಮಹೇಂದ್ರನಾಥನೆಂದು, ವೀರಗಿರಿ ರಾಜ್ಯದವನು ನಾನು. ಚಿಕ್ಕಂದಿನಲ್ಲೇ ನನ್ನ ತಂದೆಯನ್ನು ಕಳೆದುಕೊಂಡೆನು. ಆಗಿನಿಂದಲೂ ನಾವು ತಾಯಿ ಮಗನ ಕ್ಷೇಮವನ್ನು ನಮ್ಮ ಚಿಕ್ಕಪ್ಪ ನೋಡಿಕೊಂಡಿದ್ದರು. ದುರದೃಷ್ಟದಿಂದ ನಮ್ಮ ಚಿಕ್ಕಮ್ಮ ಪ್ರಸವ ಸಮಯದಲ್ಲಿ ಸತ್ತು ಹೋಗಿಬಿಟ್ಟಳು. ಅದರಿಂದ ಚಿಕ್ಕಪ್ಪನಿಗೆ ದೊಡ್ಡ ವೈರಾಗ್ಯ ಬಂದು ನಮ್ಮನ್ನು ಬಿಟ್ಟು ಎಲ್ಲಿಗೋ ಹೋದರು. ಆಗಿನಿಂದ ನಾನೂ ನಮ್ಮಮ್ಮನೂ ಮಾತ್ರವೇ ಇದ್ದೇವೆ. ತಾಯಿ ದೇವಾಲಯಕ್ಕೆ ಹೂಮಾಲೆ ಕಟ್ಟಿ ಕೊಟ್ಟು, ಅದರಿಂದ ಬರುವ ಆದಾಯದಿಂದ ನಾವಿಬ್ಬರೂ ಬದುಕುತ್ತಿದ್ದೇವೆ. ಇಷ್ಟೇ ನನ್ನ ಸಂಗತಿ ಸ್ವಾಮೀ'' ಎಂದನು ಮಹೇಂದ್ರನಾಥ.

ಆ ಮಾತು ಕೇಳಿದ ಕೂಡಲೇ ಸನ್ಯಾಸಿ ಏಕೋ ಚಟಕ್ಕನೆ ತನ್ನ ಕಾಲುಗಳನ್ನು ಕೈಗಳಿಂದ ಮೆಲ್ಲನೆ ಬಿಡಿಸಿ ಮೇಲೆತ್ತಿಕೊಂಡನು.

ತನ್ನ ದಯನೀಯ ಕಥೆಯನ್ನು ಕೇಳಿ ಅವನ ಮನಸ್ಸು ಚಲಿಸಿತೆಂದು ಭಾವಿಸಿದ ಮಹೇಂದ್ರನಾಥನು, "ಒಂದು ವಾರದ ಕೆಳಗೆ ವೀರಗಿರಿ



ಯುವರಾಣಿ ವಿದ್ಯಾವತಿಯನ್ನು ಯಾರೋ ಅಪಹರಿಸಿಕೊಂಡು ಹೋದರು. ರಾಜಭಟರು ಅವಳನ್ನು ನಾಲ್ಕು ದಿಕ್ಕುಗಳಲ್ಲಿ ಹುಡುಕಿದರು. ಅವಳನ್ನು ಹುಡುಕಲು ನಾನು ಕೂಡ ಹೊರಟಿದ್ದೇನೆ. ಅದಕ್ಕೆ ರಾಜನ ಅನುಮತಿ ಕೂಡಾ ನನಗೆ ಸಿಕ್ಕಿದೆ. ಸರೋವರವನ್ನು ಆನಿಸಿಕೊಂಡಿದ್ದ ಅರಣ್ಯದಲ್ಲಿ ಈ ಕಡೆಗೆ ಬಂದು ನಿಮ್ಮನ್ನು ದರ್ಶನ ಮಾಡಿ ಧನ್ಯನಾದೆನು'' ಎಂದನು ಮತ್ತೆ ಕೈ ಮುಗಿಯುತ್ತ.

''ಹಾಗೇನು? ಈ ಪ್ರಾಂತದಲ್ಲಿ ಮಾನವರಾರೂ ಇಲ್ಲಪ್ಪಾ. ನೀನೊಬ್ಬನೇ ಮಾನವನು ಬಂದಿರುವಿ. ಒಂದು ಕಡೆಯಲ್ಲಿ ಧವಳಗಿರಿ ಪರ್ವತಗಳಿವೆ. ಅವುಗಳೊಳಗೆ ಮಾನವ ಮಾತ್ರರಾರೂ ಪ್ರವೇಶಿಸಲು ಸಾಧ್ಯವಿಲ್ಲ. ಆ ಪರ್ವತದಾಚೆಗೆ ಹಿಮಗಿರಿ ರಾಜ್ಯವಿದೆ. ಅಲ್ಲಿಂದ ಆ ರಾಜ್ಯವನ್ನು ಸೇರುವುದು ಎಂಥ ಎದೆಗಾರನಿಗೆ ಕೂಡಾ ಸಾಧ್ಯವಾಗದು!'' ಎಂದನು ಸನ್ಯಾಸಿ.

ಪಶ್ಚಿಮ ದಿಕ್ಕಿನಿಂದ ಹುಡುಕಿದರೆ ಒಳ್ಳೇ ಫಲ ಸಿಗುತ್ತದೆಂದು ಜ್ಯೋತಿಷಾಚಾರ್ಯರು ಹೇಳಿದ್ದಾರೆ. ಮಹಾತ್ಮಾ! ನಾನು ಯುವಕನು. ಎಂಥಾ ಕಷ್ಟವನ್ನಾದರೂ ಇದಿರಿಸುವಂಥವನು. ಧರ್ಮ ಪ್ರಭುವಾದ ನಮ್ಮ ಮಹಾರಾಜರ ಚಿಂತೆಯನ್ನು ಹೋಗಲಾಡಿಸುವುದು ನನ್ನ ಕರ್ತವ್ಯವೆಂದು ತಿಳಿದಿದ್ದೇನೆ. ಕರ್ತವ್ಯ ನಿರ್ವಹಣೆಯಲ್ಲಿ ಪ್ರಾಣ ಕೊಡಲಿಕ್ಕೂ ಸಿದ್ಧನಾದವನು ನಾನು! ನಿಮಗೆ ಉಪಾಯವೇನಾದರೂ ತಿಳಿದಿದ್ದರೆ ನಿಃಶಂಕೆಯಿಂದ ತಿಳಿಸಿ ಉಪಕರಿಸಬೇಕು ಸ್ವಾಮೀ!'' ಎಂದನು ಮಹೇಂದ್ರನಾಥ.

''ಆದರ್ಶನಾದ ಯುವಕ ನೀನು. ನಿನ್ನ ನಿರ್ಣಯವನ್ನು ನಾನು ತುಂಬಾ ಮೆಚ್ಚುತ್ತೇನೆ, ಸರಿ, ಈಗ ಮಲಗಿ ನಿದ್ದೆ ಮಾಡು. ಬೆಳಿಗ್ಗೆ ಹೊರಟು ಹೋಗಬಹುದು'' ಎಂದನು ಸನ್ಯಾಸಿ. ಸನ್ಯಾಸಿ ಕೂಡಾ ನಿದ್ರೆಗೆ ಉಪಕ್ರಮಿಸಿದನು.

ಮಹೇಂದ್ರನಾಥನು ಬೆಳಿಗ್ಗೆ ನಿದ್ದೆಯಿಂದೆದ್ದಾಗ, ಸನ್ಯಾಸಿ ಧ್ಯಾನಮುದ್ರೆಯಲ್ಲಿ ಕುಳಿತಿದ್ದನು. ಅವನು ಕಣ್ಣು ತೆರೆದ ಕೂಡಲೇ ಮಹೇಂದ್ರನಾಥನು ಸಾಷ್ಟಾಂಗ ನಮಸ್ಕಾರ ಮಾಡಿನು.

ಸನ್ಯಾಸಿ ಅವನಿಗೆ ಆಶೀರ್ವಾದ ಮಾಡಿ, ''ನಿನ್ನ ಧೈರ್ಯ ಸಾಹಸಗಳೇ ನಿನಗೆ ವಿಜಯ ಕೊಡುತ್ತದೆ. ಇಕೋ ಈ ಉಂಗುರವನ್ನು ಧರಿಸಿಕೋ. ಇದು ನಿನಗಾಗಿಯೇ ದಿವ್ಯಶಕ್ತಿಗಳನ್ನು ಅಭಿಮಂತ್ರಿಸಿದ ಉಂಗುರ. ಇದರ ಕಲ್ಲಿನಲ್ಲಿ ಪ್ರತ್ಯೇಕವಾದ ವಿಶೇಷ ಶಕ್ತಿಯಿದೆ. ಅದೇನೆಂದು ಹೋಗುವಾಗ ನಿನಗೆ ಗೊತ್ತಾಗುತ್ತದೆ. ಆದರೆ ಈ ವಿಷಯವನ್ನು ನೀನು ಯಾರಿಗೂ ಹೇಳಕೂಡದು. ಹೇಳಿಬಿಟ್ಟರೆ ಇದರ ಎಲ್ಲಾ ಶಕ್ತಿಗಳೂ ಹೋಗಿಬಿಡುತ್ತವೆ.



ನಿನ್ನ ಪ್ರಯಾಣದಲ್ಲಿ ವಿಜಯ ಸಾಧಿಸಿ, ತಿರುಗಿ ಬರುವಾಗ ನಿನ್ನ ತಾಯಿಯನ್ನು ನೋಡುವುದಕ್ಕೆ ಮೊದಲು, ನನ್ನ ಬಳಿಗೆ ಬಾ. ಆ ಮುದುಕಿ ನಿನ್ನ ಬರುವಿಕೆಗಾಗಿ ಎಷ್ಟು ತಪಿಸುವಳೋ ಏನೋ! ಆದರೂ ಅವಳನ್ನು ನೋಡುವುದಕ್ಕೆ ಮೊದಲು ನನ್ನನ್ನು ಬಂದು ನೋಡು'' ಎಂದನು ಸನ್ಯಾಸಿ.

"ಮಹಾತ್ಮರೇ, ನನ್ನ ತಾಯಿಯನ್ನು ಕುರಿತು ನೀವು ಚಿಂತಿಸಬೇಕಾಗಿಲ್ಲ. ಅವಳ ಸಂರಕ್ಷಣೆಯ ಭಾರವನ್ನು ಮಹಾರಾಜರೇ ನೋಡಿಕೊಳ್ಳುತ್ತಾರೆ. ನಿಮ್ಮ ಆಜ್ಞಾನುಸಾರವಾಗಿ ನಾನು ವಿಜಯಿಯಾಗಿ ಹೊರಟ ಮೇಲೆ ಮತ್ತೆ ಬಂದು ನಿಮ್ಮ ದರ್ಶನ ಮಾಡುತ್ತೇನೆ, ಈಗ ಆಶೀರ್ವಾದ ಮಾಡಿರಿ ಮಹಾತ್ಮಾ!'' ಎಂದು ನಮಸ್ಕಾರ ಮಾಡಿದನು ಮಹೇಂದ್ರನಾಥ.

ಸನ್ಯಾಸಿ ಅವನನ್ನು ಪ್ರೀತಿಯಿಂದ ಆಲಿಂಗಿಸಿದನು. ಆಗ ಅವನ ಕಣ್ಣುಗಳು ಒದ್ದೆಯಾಗುವುದನ್ನು ನೋಡಿ, ಮಹೇಂದ್ರನಾಥನು ಅಮಿತಾಶ್ಚರ್ಯ ಪಟ್ಟನು. ಸನ್ಯಾಸಿ ತನ್ನನ್ನು ಆತ್ಮೀಯನನಾಗಿ ತಿಳಿದು ಆನಂದ ಭಾಷ್ಪ ಸುರಿಸುವಂತೆ ಭಾವಿಸಿದನು.

ಕುಟೀರದಿಂದ ಹೊರಗೆ ಹೊರಟ ಮಹೇಂದ್ರನಾಥನು ಸೇನಾನಾಯಕನ ಸಲಹೆಯನ್ನು ನೆನಪಿಗೆ ತಂದುಕೊಂಡು, ಪಶ್ಚಿಮ ದಿಕ್ಕಿನ ಕಡೆಗೆ ನಡೆದನು. ಸರಿಯಾದ ದಾರಿ ಎಂಬುದೇನಿಲ್ಲದೆ ಹೋದರೂ, ನಡೆಯಲು ಅಷ್ಟೇನೂ ಕಷ್ಟವೆನಿಸಲಿಲ್ಲ.

ಸ್ವಲ್ಪ ದೂರ ಹೋದ ಮೇಲೆ ಒಂದು ಗುಡ್ಡವು ಕಾಣಿಸಿತು. ಅವನು ಆ ಗುಡ್ಡದ ಮೇಲೆ ಏರುತ್ತಾ ಅಲ್ಲಲ್ಲಿ ನಿಲ್ಲುತ್ತಾ, ಕೆಳಗೆ ನೋಡುತ್ತಿದ್ದನು. ಮರದ ಮೇಲಿನ ಕೊಂಬೆಗಳ ಹೊರತು ಅವನಿಗೆ ಏನೂ ಕಾಣಿಸಲಿಲ್ಲ.

ಸೂರ್ಯನು ಅಸ್ತಮಿಸುವ ಸಮಯಕ್ಕೆ ಗುಡ್ಡದ ಶಿಖರವನ್ನು ತಲುಪಿದನು. ಅವನ ಮುಂದೆ ದೊಡ್ಡದಾದ ಒಂದು ಕೋಟೆ ಗೋಡೆಯಂಥದ್ದು ಕಂಡಿತು. ಅದೊಂದು ದೊಡ್ಡ ಭವನದ ಪ್ರಹರೀ ಗೋಡೆಯೆಂದುಕೊಂಡು ಹತ್ತಿರ ಹೋಗಿ ಸುತ್ತಲೂ ನೋಡಿದನು.

ದ್ವಾರವೇನೂ ಕಾಣಲಿಲ್ಲ. ಕತ್ತಲೆ ಮುಸುಕಿಕೊಂಡು ಬರುವಾಗ ಒಂದು ಕಡೆ ಮೆಟ್ಟಿಲುಗಳು ಕಂಡುವು. ಆ ಮೆಟ್ಟಿಲಿನ ದಾರಿಯಲ್ಲಿ ಮಹೇಂದ್ರನಾಥನು ಬಾಗಿಲು ಮುಚ್ಚಿದ ಕಬ್ಬಿಣದ ದ್ವಾರದ ಹತ್ತಿರ ತಲುಪಿದನು. ಬಾಗಿಲುಗಳಿಗೆ ಬಲವಾದ ಸರಪಳಿ ಬಿಗಿಯಲಾಗಿತ್ತು. ಆ ಸರಪಳಿಯನ್ನು ಹಿಡಿದು ಬಲವಾಗಿ ಆಚೆಗೂ ಈಚೆಗೂ ಎಳೆದನು.

ಅದರ ಶಬ್ದ ಕೇಳಿ ಸ್ವಲ್ಪ ಹೊತ್ತಿಗೆ ಕೈಯಲ್ಲಿ ದೀವಟಿ ಹಿಡಿದುಕೊಂಡು ಯಾರೋ ಬಂದು, ಸ್ವಲ್ಪ ಬಾಗಿಲು ತೆರೆದು, "ನಮಸ್ಕಾರ ಸ್ವಾಮೀ!...''

ಎಂದು ಮಾತು ನಿಲ್ಲಿಸಿ—"ಅರೆ! ಯಜಮಾನರೆಂದು ಕೊಂಡರೆ,ಯಾರಿವನು?... ಎಲೋ ಯಾರೋ ನೀನು? ಹೀಗೇಕೆ ಬಂದಿ?'' ಎಂದು ಕೇಳಿದನು, ಆಶ್ಚರ್ಯದಿಂದ. ಯಜಮಾನರು ಹೀಗೆ ಕಳ್ಳರ ಹಾಗೆ ಬರುವ ಸಂಗತಿ ತಿಳಿದು ಮಹೇಂದ್ರನಾಥ ನಿಗೂ ಆಶ್ಚರ್ಯವಾಯಿತು.

"ನನ್ನ ಹೆಸರು ಮಹೇಂದ್ರನಾಥ, ವೀರಗಿರಿ ರಾಜ್ಯದವನು. ಬದುಕುವ ದಾರಿ ಹುಡುಕಲು ಹಿಮಗಿರಿ ರಾಜ್ಯಕ್ಕೆ ಹೋಗುತ್ತಿದ್ದೇನೆ. ದಾರಿ ತಿಳಿಯದೆ ತಪ್ಪಿ ಹೋಗಿ ಎಲ್ಲೆಲ್ಲೋ ತಿರುಗಿ ಇಲ್ಲಿಗೆ ಸೇರಲು ಮೂರು ದಿನಗಳು ಬೇಕಾಯಿತು. ನನ್ನನ್ನು ಸ್ವಲ್ಪ ಒಳಗೆ ಬಿಟ್ಟರೆ ಈ ರಾತ್ರಿ ಇಲ್ಲಿಯೇ ಇದ್ದು, ಬೆಳಗಾದ ಕೂಡಲೇ ನನ್ನ ದಾರಿ ಹಿಡಿದು ಹೋಗುತ್ತೇನೆ'' ಎಂದು ಕೈ ಮುಗಿಯುತ್ತಾ ಕೇಳಿಕೊಂಡನು ಮಹೇಂದ್ರನಾಥ.

ಸರಪಳಿಯ ಬೀಗ ತೆಗೆದು ಅವನು ಬಾಗಿಲು ತೆರೆಯುತ್ತಾ, "ನಾನು ಈ ಭವನದ ದ್ವಾರವನ್ನು ಕಾಯುವ ಕಾವಲುಗಾರನು. ನನಗೊಂದು ಪ್ರತ್ಯೇಕ ಕೋಣೆಯಿದೆ'' ಎಂದು ಮಹೇಂದ್ರನಾಥನನ್ನು ತನ್ನ ಕೋಣೆಗೆ ಕರೆದುಕೊಂಡು ಹೋಗಿ, 'ನೀನಿಲ್ಲಿ ಕುಳಿತುಕೋ, ನಿನಗೇನಾದರೂ ತಿನ್ನಲು ತರುತ್ತೇನೆ. ಹೊಸಬರಾರನ್ನೂ ಒಳಗೆ ಬಿಡಬಾರದೆಂಬುದು ನಮ್ಮ ಯಜಮಾನ್ರ ಆಜ್ಞೆ. ಅವರೀಗ ಇಲ್ಲಿರುತ್ತಿದ್ದರೆ ನಾನು ನಿನ್ನನ್ನು ಒಳಗೆ ಬಿಡುತಿದ್ದಿಲ್ಲ. ಅದೊಂದು ನಿನ್ನ ಪುಣ್ಯ!'' ಎಂದನು.

"ನನ್ನ ಕಾರಣದಿಂದ ದಯಾಳುಗಳಾದ ನೀವು ಕಷ್ಟಕ್ಕೆ ಬೀಳುವುದು ನನಗಿಷ್ಟವಿಲ್ಲ. ನಾನು ಬೆಳಗಾಗುವುದಕ್ಕೆ ಮೊದಲೇ ಎದ್ದು ಇಲ್ಲಿಂದ ಹೋಗಿ ಬಿಡುತ್ತೇನೆ'' ಎಂದನು ಮಹೇಂದ್ರನಾಥ.

"ಹಾಗೇ ಮಾಡು. ನಮ್ಮ ಯಜಮಾನರು



ಚಂಡಶಾಸನರಾದರೂ ಬಹಳ ಒಳ್ಳೆಯವರು. ನಿನ್ನನ್ನು ನಾನು ಅನುಮತಿಸಿದ್ದು ತಿಳಿದರೆ ಕನಿಕರ ತೋರಿಸುವ ದಯಾಮೂರ್ತಿ. ಅವರಿಗೆ ನನ್ನ ಮೇಲೆ ಅಷ್ಟು ವಿಶ್ವಾಸವಿದೆ. ನೀನೇನೂ ಹೆದರ ಬೇಕಾಗಿಲ್ಲ'' ಎಂದು ಹೇಳಿ ದ್ವಾರಪಾಲಕನು ಕೋಣೆಯಿಂದ ಹೊರಗೆ ಹೋದನು.

ಅರಣ್ಯ ಮದ್ಯದಲ್ಲಿ ಎತ್ತರವಾದ ಗುಡ್ಡದ ಮೇಲೆ ನಿರ್ಮಾನುಷ್ಯ ಪ್ರದೇಶದಲ್ಲಿ ಈ ಭವನವನ್ನು ಏಕೆ ನಿರ್ಮಿಸಿದರೋ? ಈ ಭವನದ ಯಜಮಾನ ಯಾರಾಗಿರಬಹುದು? ಎಷ್ಟು ದೊಡ್ಡ ಧನ ವಂತನೋ? ಯಾವ ಮಹಾರಾಜನೋ! ಅವನು ತುಂಬಾ ದಯಾಮಂತನೆಂದು ಈ ದ್ವಾರಪಾಲಕನು ಹೇಳುತ್ತಾನೆ. ಅವನಂಥವನು ಯುವರಾಣಿಯನ್ನು ತಂದು ಇಲ್ಲೆಲ್ಲಾದರೂ ಅಡಗಿಸಿಟ್ಟಿರಬಹುದೇ?'' ಎಂದೆಲ್ಲಾ ಮಹೇಂದ್ರನಾಥನು ಬಗೆ ಬಗೆಯಾಗಿ

ಆಲೋಚನೆಯಲ್ಲಿ ಮುಳುಗಿದನು.

ಇಷ್ಟರಲ್ಲಿ ದ್ವಾರಪಾಲಕನು ಒಂದು ತಟ್ಟೆಯಲ್ಲಿ ಏನೇನೋ ಆಹಾರ ಪದಾರ್ಥಗಳನ್ನು ತಂದು ಮಹೇಂದ್ರನಾಥನ ಮುಂದಿಟ್ಟು, "ಈಗ ಇಷ್ಟೇ ದೊರಕಿದ್ದು. ಇದರಿಂದ ನಿನ್ನ ಹಸಿವೆ ತೀರಿಸಿ ಕೋಪ್ಪ. ಸಾಕಾಗದಿದ್ದರೆ ನೀರು ಕೊಡುತ್ತೇನೆ. ಕುಡಿ'' ಎಂದನು.

"ನಿಮ್ಮ ಯಜಮಾನ್ರು ಯಾವಾಗ ಬರುತ್ತಾರೆ? ಅದಕ್ಕೊಂದು ಹೊತ್ತು ಗೊತ್ತೇನೂ ಇಲ್ಲವೇ?'' ಎಂದು ಕೇಳಿದನು ಮಹೇಂದ್ರನಾಥ.

"ಯಾವಾಗ ಬರುತ್ತಾರೋ, ಯಾವಾಗ ಹೋಗುತ್ತಾರೋ ಯಾರಿಗೂ ಗೊತ್ತಿಲ್ಲಪ್ಪ! ಕೆಲವು ಸಾರಿ ಬಂದರೆ ಎರಡು ಮೂರು ದಿನ ಇಲ್ಲೆ ಇರುವುದೂ ಉಂಟು. ಆದ್ದರಿಂದ ಯಾವ ಕ್ಷಣ ದಲ್ಲಾದರೂ ಬರಬಹುದೆಂದು ನಾವು ಬಹಳ ಜಾಗರೂಕತೆಯಲ್ಲಿರುತ್ತೇವೆ'' ಎಂದನು ಅವನು.

"ನಾವು ಅಂದುದರಿಂದ, ನಿಮ್ಮೊಂದಿಗೆ ಎಷ್ಟು ಮಂದಿ ಇದ್ದಾರೆ? ಯಜಮಾನ್ರ ಕುಟುಂಬದವರು ಕೂಡಾ ಅವರೊಂದಿಗೆ ಇರುತ್ತಾರೋ?'' ಎಂದು ಕೇಳಿದನು ಮಹೇಂದ್ರನಾಥ.

"ಯಜಮಾನ್ರ ಕುಟುಂಬದವರಾರೂ ಇಲ್ಲಿಲ್ಲ. ಅವರು ಈ ಭವನದಲ್ಲಿ ಯಾವಾಗಲೂ ಒಬ್ಬರೇ ಇರುತ್ತಾರೆ. ತನ್ನ ಕೋಣೆಯ ಗ್ರಂಥಾಲಯದಲ್ಲಿ ತಾಲಪತ್ರ ಗ್ರಂಥಗಳನ್ನು ಪರೀಕ್ಷಿಸಿ ಓದುತ್ತಾ ದಿನಪೂರ್ತಿ ಇರುತ್ತಾರೆ.

"ಇತ್ತೀಚೆಗೆ ಇಲ್ಲಿಗೆ ಯಾರೋ ದೊಡ್ಡ ಮನೆತನದವಳು ಬಂದಳು. ಅವಳೇನೋ ನಮ್ಮ ಯಜಮಾನ್ರ ಹತ್ತಿರ ಏನೋ ಮುಖ್ಯ ವಿಷಯ ಮಾತಾಡಲು ಬಂದಿರಬೇಕು. ಅವಳು ಬಂದ ಮೇಲೆ ಯಜಮಾನ್ರು ಗಡಿಬಿಡಿಯಿಂದ ಎಲ್ಲಿಗೋ ಹೋಗಿಬಿಟ್ಟರು. ಆದ್ದರಿಂದಲೇ ಅವರು ಯಾವ ಕ್ಷಣದಲ್ಲಾದರೂ ಬರಬಹುದೆಂದು ನಾವು ಕಣ್ಣಿಗೆ ಎಣ್ಣೆ ಹಾಕಿಕೊಂಡು ಇದಿರು ನೋಡಿಕೊಂಡಿರು ತ್ತೇವೆ'' ಎಂದನು ದ್ವಾರಪಾಲಕ.

ಅವನು ಯಾವಳೋ ದೊಡ್ಡ ಮನೆತನದವಳು ಬಂದಳೆಂದು ಹೇಳಿದ ಕೂಡಲೇ ಮಹೇಂದ್ರ ನಾಥನಿಗೆ ಹೊಸ ಬೆಳಕು ತೋರಿದಂತಾಯಿತು. ಅವಳು ಯುವರಾಣಿ ವಿದ್ಯಾವತಿಯಾಗಿರಬಹು ದೇನೋ ಎಂಬ ಅನುಮಾನವೆದ್ದಿತು. ಹೇಗಾದರೂ ಏನಾದರೂ ಇಲ್ಲಿಯೇ ಕೆಲವು ದಿನ ಇರುವುದು ಅಗತ್ಯವೆಂದು ಅವನು ನಿರ್ಣಯಿಸಿಕೊಂಡನು.

—(ಇನ್ನೂ ಇದೆ)





# ಮಾಯಾಭವನ

೮

[ಯುವರಾಣಿ ವಿದ್ಯಾವತಿಯನ್ನು ಕಂಡು ಹಿಡಿಯಲು ಹೊರಟ ಮಹೇಂದ್ರನಾಥನು ಅರಣ್ಯ ಮಾರ್ಗದಲ್ಲಿ ಒಬ್ಬ ಬಲಿಷ್ಠನಾದ ಸನ್ಯಾಸಿಯನ್ನು ನೋಡಿದನು. ಆ ಸನ್ಯಾಸಿ ಅವನಿಗೊಂದು ಮಹಿಮೆಯ ಉಂಗುರವನ್ನು ಕೊಟ್ಟನು. ಅಲ್ಲಿಂದ ಪ್ರಯಾಣ ಹೊರಟ ಮಹೇಂದ್ರನಾಥನಿಗೆ ಬೆಟ್ಟದ ಮೇಲೊಂದು ಬ್ರಹ್ಮಾಂಡದಂತಹ ಭವನವು ಕಾಣಿಸಿತು. ಆ ಭವನದ ದ್ವಾರಪಾಲಕನು ಆ ರಾತ್ರಿಯನ್ನು ಅಲ್ಲಿಯೇ ಕಳೆಯಲು ಹೇಳಿ ಆಶ್ರಯ ಕೊಟ್ಟನು. —ಅನಂತರ]

ಹಾಗೆ ಮಲಗಿದ ಮಹೇಂದ್ರನಾಥನಿಗೆ ಏನೇನೋ ಆಲೋಚನೆಗಳಿಂದ ನಡುರಾತ್ರಿಯ ವರೆಗೂ ನಿದ್ದೆ ಬರಲಿಲ್ಲ.

ಆ ಸನ್ಯಾಸಿಯ ನೆನಪು ಬಂದು ಅವನು ಕೊಟ್ಟ ಮಹಿಮೆಯ ಉಂಗುರವನ್ನು ಮುಟ್ಟಿ ತಡವಿ ಕೊಂಡಿರುವಾಗ ಅವನಿಗೆ ತಿಳಿಯದಂತೆಯೇ ಒಳ್ಳೆಯ ನಿದ್ದೆ ಬಂತು.

ಬೆಳಗಾಗುತ್ತಾ ಬರುವಾಗ ಎಚ್ಚರಕ್ಕೆ ಬಂದು ಸುತ್ತುಮುತ್ತಲಿನ ಗಡಿಬಿಡಿಯನ್ನು ನೋಡಿ ಅತ್ತಿತ್ತ ತಲೆ ತಿರುಗಿಸಿ ಎದ್ದು ಕುಳಿತನು. ಆಗ ಅವನ ಸುತ್ತು ಮುತ್ತಲೂ ತುಂಬಾ ಗಡಿಬಿಡಿಯ ಅವಸರದಲ್ಲಿ ಯಾರು ಯಾರೋ ಓಡಾಡುತ್ತಿದ್ದರು.

ಅದರೆಡೆಯಲ್ಲಿ ದ್ವಾರಪಾಲಕನು ಒಂದು ಹರಿವಾಣದಲ್ಲಿ ತುಂಬಾ ಆಹಾರ ಪದಾರ್ಥಗಳನ್ನು ಅವಸರದಿಂದ ತಂದು ಮಹೇಂದ್ರನಾಥನ ಮುಂದೆ ಇಟ್ಟನು. ಅವರಿಬ್ಬರೂ ಒಟ್ಟಿಗೇ ಊಟ ಮುಗಿಸಿ ಕೈಗಳನ್ನು ತೊಳೆದುಕೊಳ್ಳುತ್ತಿರುವಾಗ ಮಹೇಂದ್ರನಾಥನು "ನಿಮ್ಮ ಯಜಮಾನರು ಬಂದರಷ್ಟೇ?"



ಮುಂದುವರಿಸಬಹುದು. ಅಷ್ಟರೊಳಗೆ ಇಲ್ಲಿಯೇ ನಿನಗೇನಾದರೂ ಉದ್ಯೋಗ ಸಿಕ್ಕುತ್ತದೋ ಪ್ರಯತ್ನಿಸುತ್ತೇನೆ. ಉದ್ಯೋಗಕ್ಕಾಗಿ ತಿರುಗುವ ನಿನಗೆ ತಿರುಗುವ ಕಷ್ಟ ತಪ್ಪಿದರೆ ಸಂತೋಷ ತಾನೇ?'' ಎಂದನು ದ್ವಾರಪಾಲಕ.

"ನಿಮ್ಮ ಉಪಕಾರ ಮರೆಯುವಂಥಾದ್ದಲ್ಲ. ನಿಮ್ಮ ಯಜಮಾನರು ಕನಿಕರಿಸಿ, ಉದ್ಯೋಗ ಕೊಟ್ಟರೆ, ಇಲ್ಲಿಯೇ ಕೆಲವು ದಿನ ಕಳೆಯುತ್ತೇನೆ. ಸ್ಥಿರವಾಗಿ ಇಟ್ಟುಕೊಂಡರೆ ಒಳ್ಳೇದೇ ಆಯಿತು. ಇಲ್ಲದಿದ್ದರೆ ನಿಮಗೆ ನನ್ನಿಂದ ತೊಂದರೆ ಬಾರದಂತೆ ನಾಳೆ ರಾತ್ರಿಯೇ ನನ್ನ ಪ್ರಯಾಣ ಮುಂದುವರಿಸಿಕೊಳ್ಳುತ್ತೇನೆ. ನಿಮ್ಮಂಥ ಒಳ್ಳೆಯವರ ಗುರುತಾದದ್ದೇ ಒಂದು ದೊಡ್ಡ ಪುಣ್ಯವಲ್ಲವೇ? ಬೇರೆಲ್ಲಿದ್ದರೂ ಹೆಚ್ಚಿನ ಸಹಾಯ ಬೇಕಾದಾಗ ನಿಮ್ಮನ್ನು ಕೇಳಬಹುದಷ್ಟೇ? ಆತುರ ಪಡದೆ ಸಹನೆಯಿಂದ ಕಾದುಕೊಂಡಿರುತ್ತೇನೆ'' ಎಂದನು ಮಹೇಂದ್ರನಾಥ.

"ಆ ಸಂಗತಿ ನನಗೆ ಬಿಟ್ಟು ನೀನು ನಿಶ್ಚಿಂತೆಯಿಂದ ವಿಶ್ರಾಂತಿ ತೆಗೆದುಕೋ. ನನ್ನ ನೆನಪು ನಿನ್ನಲ್ಲಿ ಉಳಿಯುವ ಹಾಗೆ ಸಮಯ ನೋಡಿ ಯಜಮಾನರ ಹತ್ತಿರ ನಿನ್ನ ಉದ್ಯೋಗದ ಸಂಗತಿ ಹೇಳುತ್ತೇನೆ'' ಎಂದು ಹೇಳಿ ದ್ವಾರಪಾಲಕನು ಅಲ್ಲಿಂದ ಹೊರಟು ಹೋದನು.

ಮಹೇಂದ್ರನಾಥನು ಆ ಕೋಣೆಯೊಳಗೇ ಕುಳಿತು, ಒಂದು ಕಿಟಕಿಯ ಮೂಲಕ ಹೊರಗೆ ನೋಡುತ್ತಿದ್ದನು. ಅಲ್ಲಿಯ ಗಡಿಬಿಡಿ ವಾತಾವರಣ ನೋಡುತ್ತಲೇ ಮಿಂಚಿನಂತೆ ಅವನಿಗೊಂದು ಆಲೋಚನೆ ಹೊಳೆಯಿತು.

ಗಡಿಬಿಡಿಯಾಗಿ ಕೆಲಸ ಮಾಡುವ ಸೇವಕರ ನಡುವೆ ತಾನೂ ಕಲೆತುಕೊಂಡು ಬಿಟ್ಟರೆ ಭವನದ ಒಳಗಡೆಗಳನ್ನೂ, ಹೊರಗಡೆಗಳನ್ನೂ ಪರೀಕ್ಷಿಸಿ

ಎಂದು ಕೇಳಿದನು.

ದ್ವಾರಪಾಲಕನು ಆಶ್ಚರ್ಯದಿಂದ ಕಣ್ಣರಳಿಸಿ ಹುಬ್ಬು ಮೇಲೆತ್ತಿ, "ಆ ಸಂಗತಿ ನಿನಗೆ ಹೇಗೆ ತಿಳಿಯಿತು?'' ಎಂದು ಕೇಳಿದನು.

"ರಾತ್ರಿ ನಿದ್ದೆಯಲ್ಲಿದ್ದಾಗ ಯಾರೋ ಬಾಗಿಲು ಸರಪಳಿಯನ್ನು ಹಿಡಿದು ಅಲುಗಾಡಿಸುವ ಶಬ್ದ ಕೇಳಿತು. ಈಗ ಎಲ್ಲಿ ನೋಡಿದರೂ ಒಂದೇ ಗಡಿಬಿಡಿ! ಗೊತ್ತಾಗುತ್ತಿದೆಯಲ್ಲಾ? ಇದೆಲ್ಲಾ ನೋಡಿ ನಿಮ್ಮ ಯಜಮಾನರು ಬಂದಿರಬೇಕೆಂದು ಊಹಿಸಿದೆ'' ಎಂದನು ಮಹೇಂದ್ರನಾಥ.

"ಹೌದು. ನಮ್ಮ ಯಜಮಾನರು ಬಂದಿರುವುದೇನೋ ನಿಜವೇ. ಆದರೆ ಅವರು ಈ ಕಡೆಗೆ ಬರುವುದೇ ಇಲ್ಲ. ಆದ್ದರಿಂದ ನೀನೇನೂ ಅವಸರ ಪಡಬೇಕಾಗಿಲ್ಲ. ಇಲ್ಲಿಯೇ ಒಂದೆರಡು ದಿನ ವಿಶ್ರಾಂತಿ ತೆಗೆದುಕೊಂಡು ನಿನ್ನ ಪ್ರಯಾಣ



Scanned by CamScanner

ನೋಡುವ ಅವಕಾಶ ಲಭಿಸುತ್ತದೆ. ಹಾಗೆಯೇ ದ್ವಾರಪಾಲಕನು ಹೇಳಿದ ಹೊಸತಾಗಿ ಅಲ್ಲಿಗೆ ಬಂದ ಮುಖ್ಯಳಾದವಳು ಯಾರೆಂದು ಕೂಡಾ ತಿಳಿಯಬಹುದು.

ಮಹೇಂದ್ರನಾಥನು ಅಲ್ಲಿದ್ದ ಒಂದು ಬಟ್ಟೆಯನ್ನು ತೆಗೆದು ತಲೆಗೆ ಸುತ್ತಿಕೊಂಡು ಯಾರಿಗೂ ಗೊತ್ತಾಗದಂತೆ ಸೇವಕರ ನಡುವೆ ಬೆರೆತು ಹೋದನು.

ಸೇವಕರೆಲ್ಲರೂ ಅವರವರ ಕೆಲಸಗಳಲ್ಲಿ ಮಗ್ನರಾಗಿದ್ದರು. ಕೆಲವರು ಉದ್ಯಾನವನದಿಂದ ಅಂದವಾದ ವಿಗ್ರಹಗಳನ್ನು ಒರೆಸುತ್ತಿದ್ದರು. ಮತ್ತೆ ಕೆಲವರು ಗಿಡಗಳಿಗೆ ನೀರೆರೆಯುತ್ತಿದ್ದರು. ಕೆಲವರು ಗಿಡಗಳ ತೊಟ್ಟಿಯನ್ನು ಈಚೆಯದಾಚೆಗೆ, ಆಚೆಯದೀಚೆಗೆ ಸುಂದರವಾಗಿ ಕಾಣುವಂತೆ ಇಡುತ್ತಿದ್ದರು. ಇನ್ನು ಕೆಲವರು ಭವನದ ಕಿಟಕಿಗಳನ್ನೂ, ಬಾಗಿಲುಗಳನ್ನೂ ಒರೆಸುತ್ತಿದ್ದರು. ಒಬ್ಬರೂ ಮಹೇಂದ್ರನಾಥನನ್ನು ಗುರುತಿಸಲಿಲ್ಲ.

ಅವನು ಸ್ವಲ್ಪ ಹೊತ್ತು ಉದ್ಯಾನವನದಲ್ಲಿ ಕೆಲಸ ಮಾಡಿ, ಮೆಲ್ಲನೆ ಭವನದ ಹತ್ತಿರ ಬಂದನು.

ಕಿಟಕಿಗಳನ್ನೂ, ಬಾಗಿಲುಗಳನ್ನೂ ಒರೆಸುತ್ತ, ಭವನದ ಒಂದು ಬಾಗಿಲಿನ ಮೂಲಕ ಒಳಗೆ ಹೋದನು. ಅಲ್ಲಿಯ ಕೆಲವು ಕೋಣೆಯ ಬಾಗಿಲುಗಳು ಮುಚ್ಚಿದ್ದುವು. ಕಿಟಕಿಗಳ ಮೂಲಕ ಒಳಗಡೆಗೆ ನೋಡಿದನು. ಒಳಗಿನ ಗೋಡೆಗಳಿಗೆ ಆಳೆತ್ತರದ ನಿಲುವು ಕನ್ನಡಿಗಳನ್ನು ಅಳವಡಿಸಿಟ್ಟಿದ್ದರು. ಅವುಗಳೊಂದಿಗೆ ಅಲ್ಲಲ್ಲಿ ಗೋಡೆಗೆ ಆನಿಸಿದ ಚಿಕ್ಕವೂ ದೊಡ್ಡವೂ ಆದ ಅನೇಕ ಕನ್ನಡಿಗಳೂ ಕಾಣಿಸಿದುವು.

ಮಹೇಂದ್ರನಾಥನು ಹಾಗೇ ಪರಿಶೀಲಿಸಿ, ಪಕ್ಕದಲ್ಲೊಂದು ಸಣ್ಣಗಿನ ದಾರಿ ಕಂಡ ಕೂಡಲೇ ಅಲ್ಲಿಗೆ ಹೋಗಿ, ಬಾಗಿಲು ಅರ್ಧ ತೆರೆದಿದ್ದ ಕೋಣೆಯೊಳಗೆ ಕಾಲಿಟ್ಟನು.

ತುಂಬಾ ವಿಶಾಲವಾದ ಆ ಕೋಣೆಯೊಳಗೂ ಗೋಡೆ ಪೂರಾ ನಿಲುವುಗನ್ನಡಿಗಳೇ! ಒಂದು





"ಕೋಣೆಯನ್ನು ಶುಭ್ರ ಪಡಿಸಲಿಕ್ಕೆ ಬಂದೆ ಸ್ವಾಮೀ. ತಮ್ಮನ್ನು ತೊಂದರೆ ಪಡಿಸಿದ್ದಕ್ಕೆ ಕ್ಷಮಿಸಿರಯ್ಯಾ, ಇದೋ ಹಿಂದಿರುಗಿದೆ! ಆಮೇಲೆ ಬಂದು ಶುಭ್ರಪಡಿಸುತ್ತೇನೆ'' ಎಂದು ಮಹೇಂದ್ರನಾಥನು ಒಂದಡಿ ಹಿಂದಿಟ್ಟನು.

"ಈ ಕೋಣೆ ಶುಭ್ರವಾಗೇ ಇದೆ. ನೀನೇನೂ ಮತ್ತೆ ಬಂದು ಏನೂ ಮಾಡಬೇಕಾಗಿಲ್ಲ. ಹೋಗು'' ಎಂದನೊಬ್ಬ ಪಂಡಿತ.

"ಅಪ್ಪಣೆ ಸ್ವಾಮೀ'' ಎಂದು ಮಹೇಂದ್ರನಾಥನು ಮತ್ತೊಮ್ಮೆ ನಮಸ್ಕಾರ ಮಾಡಿ ಆ ಕೋಣೆಯಿಂದ ಹೊರಗೆ ಜಾರಿಕೊಂಡನು.

ಆಮೇಲೆ ಮಹೇಂದ್ರನಾಥನು ಸೀದಾ ದ್ವಾರ ಪಾಲಕನ ಕೋಣೆಯನ್ನು ಸೇರಿಕೊಂಡನು. ಸ್ವಲ್ಪ ಹೊತ್ತಿಗೆ ದ್ವಾರಪಾಲಕನು ಬಾಗಿಲು ತೆರೆದು ಬಂದು "ಏನಪ್ಪಾ, ಚೆನ್ನಾಗಿ ವಿಶ್ರಾಂತಿ ತೆಗೆದುಕೊಂಡಿಯಾ? ಆಯಾಸ ಪರಿಹಾರವಾಯಿತೇ?'' ಎಂದು ಕೇಳುತ್ತಾ ಒಳಗೆ ಬಂದನು.

"ಆಹ! ಚೆನ್ನಾಗಿದ್ದೇನ್ರೀ. ಸುತ್ತಮುತ್ತಲೂ ಸೇವಕರ ಗಡಿಬಿಡಿಯ ಕೆಲಸ ನಡೆದುಕೊಂಡೇ ಇದೆ. ನಿದ್ದೆಗಿದ್ದೆ ಓಡಿಯೇ ಹೋಯಿತು. ಅವರನ್ನು ನೋಡುತ್ತಾ ಕುಳಿತುಕೊಂಡಿದ್ದೇನೆ. ಹೊತ್ತು ಹೋದದ್ದೇ ಗೊತ್ತಾಗಲಿಲ್ಲ! ನೀವು ನಿಮ್ಮ ಯಜಮಾನರನ್ನು ನೋಡಿದಿರಾ? ನನ್ನ ವಿಷಯ ಹೇಳಲು ಸಮಯ ಸಿಕ್ಕಿತೇ?'' ಎಂದು ಕೇಳಿದನು ಮಹೇಂದ್ರನಾಥ.

"ಈ ಸಾರಿ ನಮ್ಮ ಯಜಮಾನರು ಒಬ್ಬಂಟಿಗರಾಗಿ ಬರಲಿಲ್ಲ. ಮತ್ತೆ ಮೂವರು ದೊಡ್ಡವರನ್ನು ಕರೆದುಕೊಂಡು ಬಂದಿದ್ದಾರೆ. ಅವರು ಜ್ಯೋತಿಷ್ಕರ ಹಾಗೆ ಕಾಣುತ್ತಾರೆ. ಅವರೊಂದಿಗೆ ಕೂಡಿ ಮಧ್ಯಾಹ್ನ ಭೋಜನವಾದ ಮೇಲೆ ನಮ್ಮ ಯಜಮಾನರು ತಮ್ಮ ಕೋಣೆಯೊಳಗೆ ಹೋದರು. ಆದ್ದರಿಂದ

ಕಡೆಯಲ್ಲಿ ಅತ್ಯಂತ ಸುಂದರವಾದ ದೇವಿಯ ವಿಗ್ರಹವಿರುವುದು ಕಂಡಿತು. ಆ ವಿಗ್ರಹದ ಮುಂದೆ ಪಟ್ಟೇ ಕಂಬಳಿಯನ್ನು ಹರಡಿದ ನೆಲದ ಮೇಲೆ ಮೂವರು ವೃದ್ಧ ಪಂಡಿತರು ಕುಳಿತುಕೊಂಡಿದ್ದರು. ಮೂವರೂ ಒಂದೇ ವಿಧವಾದ ಕಾಷಾಯಾಂಬರ ಧರಿಸಿಕೊಂಡಿದ್ದರು. ಇಬ್ಬರು ಯಾವುದೋ ಪ್ರಾಚೀನ ಕಾಲದ ತಾಲಪತ್ರ ಗ್ರಂಥಗಳನ್ನು ಪರಿಶೀಲಿಸಿಕೊಂಡಿದ್ದರು. ಮತ್ತೊಬ್ಬ ವೃದ್ಧ ಪಂಡಿತನು ನೆಲದ ಮೇಲೆ ಗೀರಿದ ದೊಡ್ಡ ದೊಡ್ಡ ಗೀರುಗಳನ್ನು ಪರಿಶೀಲಿಸುತ್ತಿದ್ದನು. ಅದರ ಮುಖ್ಯಾಂಶಗಳನ್ನು ಹೇಳುತ್ತಿದ್ದನು.

ಬಾಗಿಲು ತೆರೆದ ಶಬ್ದ ಕೇಳಿದ ಕೂಡಲೇ "ಯಾರು ನೀನು? ಇಲ್ಲಿಗೇಕೆ ಬಂದಿ? ಯಾರು ಕರೆದರು ನಿನ್ನ?'' ಎಂದು ಕೇಳಿದನು ಆ ಮೂವರಲ್ಲಿ ಒಬ್ಬ ಪಂಡಿತ.



ಮಹೇಂದ್ರನಾಥನು ಊಹಿಸಿಕೊಂಡನು. ಅವನು ಒಂದೆರಡು ಸಾರಿ ದ್ವಾರಪಾಲಕನ ಕೋಣೆಯ ಕಡೆಗೆ ನೋಡಿದುದನ್ನು ಮಹೇಂದ್ರನಾಥ ಗಮನಿಸಿದನು. ಕೂಡಲೇ ಅವನು ನಿದ್ದೆಯಲ್ಲಿ ಮುಳುಗಿದ್ದ ದ್ವಾರಪಾಲಕನನ್ನು ತಟ್ಟಿ ಎಬ್ಬಿಸಿ, "ಮಿತ್ರಶ್ರೇಷ್ಠರೇ, ನಿಮ್ಮ ಯಜಮಾನರು ಉದ್ಯಾನ ವನಕ್ಕೆ ಒಬ್ಬರೇ ಬಂದಿದ್ದಾರೆ. ಅವರು ನಿಮ್ಮನ್ನು ನಿರೀಕ್ಷಿಸುವ ಹಾಗೆ ಇತ್ತ ಕಡೆಗೆ ಒಂದೆರಡು ಬಾರಿ ನೋಡಿದರು'' ಎಂದನು.

ದ್ವಾರಪಾಲಕನು ಮೆಟ್ಟಿ ಬಿದ್ದೆದ್ದು ಕಿಟಕಿಯಿಂದ ಹೊರಗೆ ನೋಡಿ, "ಹೌದೌದು! ಅವರೇ ನಮ್ಮ ಯಜಮಾನರು. ಅವರು ನಿನ್ನನ್ನು ನೋಡಲಿಲ್ಲ ತಾನೇ?'' ಎಂದನು.

"ಇಲ್ಲ. ನಾನು ಕೋಣೆಯಿಂದ ಹೊರಗೆ ಹೋಗಲೇ ಇಲ್ಲ. ಇಲ್ಲೇ ಕುಳಿತುಕೊಂಡಿದ್ದೆ'' ಎಂದನು ಮಹೇಂದ್ರನಾಥ.

ದ್ವಾರಪಾಲಕನು ಗಡಿಬಿಡಿಯಿಂದ ಮುಂಡಾಸು ಧರಿಸಿ, ಉದ್ಯಾನವನಕ್ಕೆ ಹೋಗಿ, ಯಜಮಾನನಿಗೆ ನಮಸ್ಕಾರ ಮಾಡಿ, ವಿಧೇಯತೆಯಿಂದ ಕೈ ಕಟ್ಟಿ ನಿಂತನು.

ಅವರಿಬ್ಬರೂ ಏನೋ ಮಾತಾಡಿಕೊಳ್ಳುವುದು ಮಹೇಂದ್ರನಾಥನಿಗೆ ಕಂಡಿತು. ಯಜಮಾನನು ಕೈಯೆತ್ತಿ ಭವನದ ಆಚೇ ಬದಿಯನ್ನು ತೋರಿಸುತ್ತಾ ಏನೋ ಹೇಳಿದನು. ದ್ವಾರಪಾಲಕನು ಬಗ್ಗಿ ನಮಸ್ಕಾರ ಮಾಡಿ ಹಿಂದಿರುಗಿ ಬಂದನು. ಯಜಮಾನನು ಭವನದೊಳಕ್ಕೆ ಹೊರಟು ಹೋದನು.

ಕತ್ತಲೆ ಬೀಳುತ್ತಿರುವಾಗ ದ್ವಾರಪಾಲಕನು ಹಿಂದಿರುಗಿ ಬಂದು ನಗುತ್ತ, "ನಿನಗೆ ಒಂದು ಶುಭವಾರ್ತೆ. ನಿನ್ನ ಅದೃಷ್ಟ ಚೆನ್ನಾಗಿದೆ. ಯಜಮಾನರು ಭವನದ ಆಚೇ ಬಾಗಿಲಿನ ದ್ವಾರ

ಅವರನ್ನು ನೋಡಲು ಸಾಧ್ಯವಾಗಲಿಲ್ಲ. ಸಾಯಂಕಾಲ ಉದ್ಯಾನವನಕ್ಕೆ ಬರುತ್ತಾರೆ. ಆಗ ಮಾತಾಡಿಸಲಾದೀತು. ನೋಡೋಣ. ನಿನ್ನ ಅದೃಷ್ಟ ಹೇಗಿದೆಯೋ ಗೊತ್ತಾಗುತ್ತೆ.'' ಎಂದು ಹೇಳಿ ದ್ವಾರಪಾಲಕನು ಹಾಗೆಯೇ ಮಲಗಿ ಸ್ವಲ್ಪ ಹೊತ್ತಿಗೆ ನಿದ್ದೆಗೆ ಬಿದ್ದನು.

ಮಹೇಂದ್ರನಾಥನು ಮತ್ತೆ ಕಿಟಕಿಯ ಹತ್ತಿರ ಹೋಗಿ ಹೊರಗೆ ನೋಡುತ್ತಾ ಕುಳಿತನು. ಸೂರ್ಯಾಸ್ತಮಾನಕ್ಕೆ ಸ್ವಲ್ಪ ಹೊತ್ತಿದೆ ಎನ್ನುವಾಗ, ಯಾವನೋ ಒಬ್ಬನು ಉದ್ಯಾನವನಕ್ಕೆ ಬರುವುದು ಕಂಡಿತು. ಅವನು ಉದ್ದವಾದ ಅಂಗಲೇಖಾಭರಣ ಧರಿಸಿದ್ದನು. ತಲೆಕೂದಲು ಉದ್ದವಾಗಿದ್ದರೂ ಗಡ್ಡವು ಗಿಡ್ಡಗಾಗಿದ್ದಿತು. ರೂಪವು ಸ್ಪಷ್ಟವಾಗಿ ಕಾಣದಿದ್ದರೂ ಅವನ ನಡಿಗೆಯಲ್ಲಿ ರಾಜಠೀವಿ ಕಾಣುತ್ತಿದ್ದಿತು. ಅವನೇ ಆ ಭವನದ ಯಜಮಾನನೇ ಆಗಿರಬೇಕೆಂದು

ಪಾಲಕನನ್ನು ಬದಲಾಯಿಸಬೇಕೆಂದರು. ಆಚೇ ಬದೀಲಿರುವವಳೆಲ್ಲಾ ಸ್ತ್ರೀಯರೇ! ಅಲ್ಲಿ ಕಾವಲಿಗಿರಲು ನಿನಗೆ ಒಪ್ಪಿಗೆಯಾದರೆ...'' ಎಂದು ಮಾತು ಪೂರ್ತಿ ಮಾಡುವುದರೊಳಗೇ ಮಹೇಂದ್ರನಾಥನು, "ಒಪ್ಪಿದೆ! ಒಪ್ಪಿದೆ! ಈ ದಿನವೇ ಉದ್ಯೋಗದಲ್ಲಿ ಸೇರುತ್ತೇನೆ'' ಎಂದನು ಹಿಡಿಸಲಾಗದ ಉತ್ಸಾಹ ದಿಂದ ದ್ವಾರಪಾಲಕನ ಕೈ ಹಿಡಿದು ಕುಲುಕುತ್ತಾ.

"ಒಳ್ಳೇದು ಮಿತ್ರಾ, ನನ್ನೊಂದಿಗೆ ಬಾ. ನಾನು ನಿನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗುತ್ತೇನೆ. ಆ ಕಡೆಯಲ್ಲಿ ಸಾಧಾರಣವಾಗಿ ಬೇರೆ ಮನುಷ್ಯರಾರೂ ಬಾರರು. ಬಾಗಿಲು ಯಾವಾಗಲೂ ಮುಚ್ಚಿಕೊಂಡೇ ಇರುತ್ತದೆ'' ಎಂದು ದ್ವಾರಪಾಲಕನು ಲಾಂದರವನ್ನು ಬೆಳಗಿಸಿ, ತನ್ನ ಹಿಂದೆಯೇ ಬರುವಂತೆ ಹೇಳಿ ಮುಂದೆ ನಡೆಯತೊಡಗಿದನು.

ಮಹೇಂದ್ರನಾಥನು ಅವನನ್ನು ಅನುಸರಿಸಿ ಹೋದನು. ಇಬ್ಬರೂ ಸ್ವಲ್ಪ ದೂರ ಹೋದ ಮೇಲೆ, ಕಬ್ಬಿಣದ ಸರಪಳಿ ಬಿಗಿಸಿದ ಕಬ್ಬಿಣದ ದ್ವಾರವು ಕಾಣಿಸಿತು.

ಅಲ್ಲಿಯ ದ್ವಾರದಲ್ಲಿ ಭವನವು ಅಷ್ಟು ಸ್ಪಷ್ಟವಾಗಿ ಕಾಣಿಸಲಿಲ್ಲ. ದ್ವಾರಪಾಲಕನು, "ಇಲ್ಲಿ ದೊಡ್ಡ ಕೆಲಸವೇನೂ ಇರುವುದಿಲ್ಲ. ನಿನಗೆ ಬೇಕಾದ ಆಹಾರ ಪದಾರ್ಥಗಳನ್ನು ತಂದು ಕೊಡುತ್ತೇನೆ. ಬೆಳಗಾದ ಕೂಡಲೇ ನಾನು ಬಂದ ಮೇಲೆ ನೀನು ಹೋಗಿ ನಮ್ಮ ಕೋಣೆಯಲ್ಲಿ ವಿಶ್ರಾಂತಿ ತೆಗೆದು ಕೊಳ್ಳಬಹುದು. ಈ ಲಾಂದರ ಇಲ್ಲೇ ಇರಲಿ, ಜಾಗ್ರತೆಯಪ್ಪಾ!'' ಎಂದು ಎಚ್ಚರಿಸಿ ತನ್ನ ಕೆಲಸದ ಮೇಲೆ ಹೋದನು.

ಸುಮಾರು ಎರಡು ಗಂಟೆ ಹೊತ್ತು ಕಳೆದ ಮೇಲೆ, ದ್ವಾರಪಾಲಕನು ಅವನಿಗಾಗಿ ಒಳ್ಳೆಯ ಆಹಾರ ತಂದನು.

ತರುವಾಯ ಅವನು ಒಂದು ಬೀಗದ ಕೈಯನ್ನು ಅವನಿಗೆ ಕೊಟ್ಟು, "ಇದನ್ನು ಜಾಗರೂಕತೆ ಯಿಂದಿಟ್ಟುಕೊಂಡಿರು. ಬಾಗಿಲು ತೆರೆದು ಆಚೆಗೆ ಹೋಗಿಬಿಡಬೇಡ. ಅಲ್ಲೆಲ್ಲಾ ಗಾಢಾರಣ್ಯ! ಕತ್ತಲೆ ಮಯ! ದಾರೀ ಗೀರೀ ಕಾಣುವುದಿಲ್ಲ'' ಎಂದು ಹೇಳಿ ಹೊರಟುಹೋದನು.

ಅವನು ಹೋದ ಮೇಲೆ ಮಹೇಂದ್ರನಾಥನು ಆ ಭವನದೊಳಗಿರುವವಳು ಯುವರಾಣಿಯೋ ಅಲ್ಲವೋ ಎಂಬುದನ್ನು ತಿಳಿದುಕೊಳ್ಳುವುದು ಹೇಗೆ? ಎಂದು ಕುತೂಹಲ ತುಂಬಿದವನಾಗಿ ಆಲೋಚಿಸುತ್ತಾ ಅಲ್ಲಿಯೇ ಕುಳಿತನು.

—(ಇನ್ನೂ ಇದೆ)





# ಮಾಯಾಭವನ

೬

[ಯುವರಾಣಿ ವಿದ್ಯಾವತಿಯನ್ನು ಹುಡುಕಲು ಹೋದ ಮಹೇಂದ್ರನಾಥನಿಗೆ ಅರಣ್ಯ ಮಧ್ಯದಲ್ಲಿ ಒಂದು ಭವನ ಕಾಣಿಸಿತು. ಅದರ ದ್ವಾರಪಾಲಕನೊಂದಿಗೆ ಅವನಿಗೆ ಸ್ನೇಹವೇರ್ಪಟ್ಟಿತು. ಮರುದಿನ ಅಲ್ಲಿಯ ಸೇವಕರೊಳಗೆ ತಾನೂ ಒಬ್ಬನಾಗಿ ಹೋಗಿ ಮಹೇಂದ್ರನಾಥನು ಭವನದೊಳಗಿನ ಕೆಲವು ಕೋಣೆಗಳನ್ನು ನೋಡಿ ಬಂದನು. ಅವನು ಭವನದ ಆಚೆ ಬದಿಯಲ್ಲಿದ್ದ ದ್ವಾರದಲ್ಲಿ ಕಾವಲುಗಾರನಾಗಿ ನಿಯಮಿಸಲ್ಪಟ್ಟನು. ಅನಂತರ –]

"ವಿದ್ಯಾವತಿ ಕಾಣದೆ ಹೋಗಿ ಒಂದು ವಾರವು ಕಳೆದು ಹೋಯಿತು. ಇದುವರೆಗೂ ಅವಳು ಎಲ್ಲಿರುವಳೆಂದು ಗೊತ್ತೇ ಆಗದಂತೆ ಮೇಲಿಂದ ಮೇಲೆ ಭ್ರಮಾ ಸಂಭವಗಳಾಗಿದ್ದುವು" ಎಂದು ಮಹೇಂದ್ರನಾಥನು ತಳಮಳಿಸಿಕೊಂಡಿದ್ದನು.

ಅರಮನೆಯಲ್ಲಿ ವಜ್ರೇಶ್ವರೀದೇವಿ ಹಿಡಿಸಲಾಗದ ವೇದನೆಯಿಂದ ಮಹಾರಾಜನೊಂದಿಗೆ ಮಗಳ ವಿಷಯವಾಗಿ ಗೋಳಿಡುತ್ತಿದ್ದಳು.

ವೀರಸೇನನು ಮಹಾರಾಜನಿಂದ ಕೂಡಲೇ ಅವಳಿಗೆ ಸ್ವಲ್ಪ ಸಮಾಧಾನದ ಉತ್ತರ ಕೊಡಲು ಸಾಧ್ಯವಿಲ್ಲದೆ ಹೇಳಿದ್ದನ್ನೇ ಮತ್ತೆ ಮತ್ತೆ ಹೇಳಲು ಬೇಸತ್ತನು. ಆದ್ದರಿಂದ ಸ್ವಲ್ಪ ಹೊತ್ತು ಸುಮ್ಮನಿದ್ದು ಆಮೇಲೆ, "ವಿದ್ಯಾವತಿಯನ್ನು ಹುಡುಕಲು ನಾಲ್ಕು ದಿಕ್ಕುಗಳಿಗೂ ನಮ್ಮ ಭಟರನ್ನು ಕಳಿಸಿದ್ದೇನಷ್ಟೇ. ಅವರಲ್ಲಿ ಕೆಲವರು ಬರಿಗೈಯಿಂದ ವಾಪಸು ಬಂದರೂ, ಇನ್ನೂ ಕೆಲವರು ಹಿಂದಿರುಗಿ ಬರಲಿಲ್ಲ. ಅದಕ್ಕೆ ಕಾರಣವಿರಬಹುದು. ನಮ್ಮ ರಾಜ್ಯದ ಪೌರರು ಕೂಡಾ ಅವಳನ್ನು ಹುಡುಕಲು ಹೋಗಿದ್ದಾರೆ. ಆದ್ದರಿಂದ ಶುಭವಾರ್ತೆಗೆ ಇನ್ನೂ ಅವಕಾಶವಿದೆ. ಬೇಗದಲ್ಲಿ ಒಳ್ಳೆಯ ವಾರ್ತೆ ಬರುತ್ತದೆಂದೇ



ನಂಬೋಣ. ನೀನು ಹೀಗೆ ಒಂದೇ ಸಮನೆ ದುಃಖಿಸುತ್ತ ಇದ್ದರೆ ನನಗೂ ಹೆಚ್ಚು ದುಃಖವಾಗುತ್ತದೆಂದು ನಿನಗೆ ಗೊತ್ತಾಗುವುದಿಲ್ಲವೇ?'' ಎಂದು ತನ್ನ ರಾಣಿಗೆ ಸಮಾಧಾನ ಹೇಳಿದನು.

"ವಿದ್ಯಾವತಿಯನ್ನು ಹುಡುಕಲು ಒಬ್ಬ ಯುವಕನೂ ಬಂದನೆಂದು ಹೇಳಿದ್ದಿರಿ. ಅವನು ತುಂಬ ಕಳೆಯುಳ್ಳವನೆಂದೂ ಹೇಳಿದ್ದಿ. ಅವನು ಏನಾದನು? ಇನ್ನೂ ಗೊತ್ತಾಗಿಲ್ಲವೇ? ಅವನ ಮೇಲೆ ನೀವೂ ನಾನು ತುಂಬಾ ನಂಬುಗೆ ಇಟ್ಟಿದ್ದೆವು. ಇನ್ನೂ ಅವನನ್ನು ನಂಬುವಿರಾ?'' ಎಂದು ಕೇಳಿದಳು ರಾಣಿ ವಜ್ರೇಶ್ವರೀದೇವಿ.

"ಹೌದಲ್ಲ! ಮಹೇಂದ್ರನಾಥ ತಾನೇ? ಅವನು ಶುಭವಾರ್ತೆ ತಿಳಿಯದೆ ಬರುವವನಲ್ಲ. ಅವನ ದೃಢ ಸಂಕಲ್ಪ, ಧೈರ್ಯ ಸಾಹಸಗಳು ನನಗೆ ಇನ್ನಿಷ್ಟು ನಂಬುಗೆ ಕೊಡುತ್ತದೆ. ಅವನ ಮುಖದಲ್ಲಿ ಕ್ಷತ್ರಿಯ ಕಳೆ ಮಿನುಗುವುದು ನನ್ನ ಕಣ್ಣಿಗೆ ಕಟ್ಟಿದೆ.'' ಎಂದನು ರಾಜ ಗಟ್ಟಿ ನಂಬುಗೆಯಿಂದ.

"ವಿದ್ಯಾವತಿಯನ್ನು ಅಪಹರಿಸಿದವರು ಯಾವುದಾದರೂ ಬಹು ದೂರದ ರಾಜ್ಯಕ್ಕೆ ಎತ್ತಿಕೊಂಡು ಹೋದರೋ ಏನೋ?'' ಎಂದು ರಾಣಿ ತನ್ನ ಸಂದೇಹವನ್ನು ಬಯಲಿಗಿಟ್ಟಳು.

"ಆ ಅನುಮಾನದಿಂದಲೇ ನಿನ್ನ ಸೋದರ ಉಗ್ರಸೇನನು ಹೊರಗಿನ ರಾಜ್ಯಗಳಲ್ಲಿರುವ ನಮ್ಮ ಗೂಢಚಾರರಿಗೆ ಈ ವಿಷಯ ತಿಳಿಸಿಟ್ಟಿದ್ದಾನೆ. ನೀನೇನೂ ಹೆದರಬೇಕಾಗಿಲ್ಲ. ಅದರ ಮೇಲೆ ವಿದ್ಯಾವತಿಗೆ ಗ್ರಹಗಳ ಪ್ರತಿಕೂಲ ದಶೆ ಕೂಡಾ ಬೇಗದಲ್ಲೇ ಅಂತ್ಯಕ್ಕೆ ಬರುತ್ತದೆ. ಅವಳು ನಮ್ಮ ಹತ್ತಿರ ಬರುವ ದಿನಗಳು ಅಷ್ಟೇನೂ ದೂರದಲ್ಲಿಲ್ಲ. ಧೈರ್ಯ ತಂದುಕೋ. ಯಾವುದಕ್ಕೂ ಒಳ್ಳೇದು. ವಾಚಸ್ಪತ್ಯಾಚಾರ್ಯರನ್ನು ಕರೆಸಿ ಯುವರಾಣಿಯ ಗ್ರಹಸ್ಥಿತಿ ಹೇಗಿರುವುದೆಂದು ತಿಳಿದುಕೊಳ್ಳೋಣ'' ಎಂದು ಹೇಳಿ ವೀರಸೇನನು ಭಟನನ್ನು ಕರೆದು ಪ್ರಧಾನ ಜ್ಯೋತಿಷಾಚಾರ್ಯನನ್ನಾಗಲೀ, ವಾಚಸ್ಪತ್ಯಾಚಾರ್ಯನನ್ನಾಗಲೀ ಕರೆದುಕೊಂಡು ಬರಲು ಕಳುಹಿಸಿದನು.

ಆ ಭಟನು ಒಬ್ಬನೇ ವಾಪಸು ಬಂದು, ವಾಚಸ್ಪತ್ಯಾಚಾರ್ಯರು ಜಗತ್ಪತ್ಯಾಚಾರ್ಯರನ್ನು ನೋಡಲು ಹೋಗಿರುವುದಾಗಿಯೂ, ಕೂಡಲೇ ಬರಬಹುದೆಂದೂ ತಿಳಿಸಿದನು.

ಆ ದಿನ ಸಾಯಂಕಾಲ ರಾಜನನ್ನು ನೋಡಲು ಬಂದ ವಾಚಸ್ಪತ್ಯಾಚಾರ್ಯನು ರಾಜನಿಗೆ ನಮಸ್ಕಾರ ಮಾಡಿ, "ನಾನು ತಮ್ಮ ದರ್ಶನಕ್ಕೆ ಹೊರಡುವ ಸನ್ನಾಹದಲ್ಲಿದ್ದೆ. ಏಕೆಂದರೆ, ನನ್ನೊಂದಿಗೆ ಬಂದಿರುವ ಇವನು ನನ್ನ ಮುಖ್ಯ ಶಿಷ್ಯರಲ್ಲಿ ಒಬ್ಬನಾದ ಮಂಜುನಾಥನೆಂಬುವನು. ಇವನು ಒಂದು ಹೊಸ

ವಾರ್ತೆ ತಂದಿದ್ದಾನೆ. ಅದನ್ನು ತಿಳಿಸಲು ಇವನನ್ನು ಕೂಡಾ ಕರೆದುಕೊಂಡು ಬಂದಿದ್ದೇನೆ. ಇವನೇ ಆ ಹೊಸ ಸಂಗತಿ ತಿಳಿಸುತ್ತಾನೆ'' ಎಂದು ತನ್ನ ಜತೆಯಲ್ಲಿದ್ದ ಯುವಕನನ್ನು ತೋರಿಸಿದನು.

"ವಿದ್ಯಾವತಿಯನ್ನು ಕುರಿತು ತಾನೇ?'' ಎಂದು ಕೇಳಿದನು ರಾಜ. ರಾಣಿಯೂ ಆತುರದಿಂದ "ಏನು ವಾರ್ತೆ ತಂದಿದ್ದಾನಪ್ಪಾ ನಮ್ಮ ಕುಮಾರಿಯನ್ನು ಕುರಿತು? ಶುಭವಾರ್ತೆ ತಾನೆ? ಮತ್ತೇನಲ್ಲವಷ್ಟೆ?'' ಎಂದಳು ಅತ್ಯಾತುರದಿಂದ.

ಮಂಜುನಾಥನು ರಾಣಿಗೆ ನಮಸ್ಕಾರ ಮಾಡಿ, "ಹೌದು ಮಹಾರಾಣಿಯವರೇ, ಜ್ಯೋತಿಷಾಸ್ತ್ರದಲ್ಲಿ ನನಗೆ ಬಂದ ಕೆಲವು ಸಂದೇಹಗಳನ್ನು ತೀರಿಸಿ ಕೊಳ್ಳಲು ಜ್ಯೋತಿಷ ಪಂಡಿತರನ್ನು ಕಲೆತುಕೊಳ್ಳ ಬೇಕೆಂದು ಹೋದೆನು. ಆಗ ಅವರು ಯುವರಾಣಿ ವಿದ್ಯಾವತಿ ದೇವಿಯವರ ಜಾತಕವನ್ನು ಪರಿಶೀಲಿಸಲು ಅವರನ್ನು ಜಗತ್ಪತ್ಯಾಚಾರ್ಯರು ನನ್ನ ಗುರುಗಳನ್ನು ಆಹ್ವಾನಿಸಿದ್ದಾರೆಂದು ನನ್ನೊಂದಿಗೆ ಹೇಳಿದರು. ಜಗತ್ಪತಿಯವರನ್ನು ನಾನು ಈ ಮೊದಲೊಂದೆರಡು ಸಾರಿ ನನ್ನ ಈ ಗುರುಗಳ ಮನೆಯಲ್ಲಿ ನೋಡಿ ದ್ದೇನೆ. ಆದ್ದರಿಂದ ಆ ಸಂಗತಿಯನ್ನು ತಿಳಿಸಲು ಇವರ ಬಳಿಗೆ ಬಂದೆನು. ಆ ಹೊಸ ವಾರ್ತೆ ಏನೆಂದರೆ ಅಲ್ಲಿ ಜಗತ್ಪತ್ಯಾಚಾರ್ಯರ ಜಾಡೇ ಇರಲಿಲ್ಲ. ಎಲ್ಲಿಗೆ ಹೋದರೋ ಏನೋ? ಇದು ಶುಭ ವಾರ್ತೆಯೋ, ಅಶುಭ ವಾರ್ತೆಯೋ ನಾನರಿಯೆನು ಮಹಾರಾಣಿಯವರೇ!'' ಎಂದನು.

"ಹೌದು ಪ್ರಭುಗಳೇ, ಬಹಳ ದಿನಗಳಿಂದ ಜಗತ್ಪತಿಯವರ ಜಾಡು ನನಗೂ ಕಾಣಲಿಲ್ಲ. ಅವರು ಇತರ ಪಂಡಿತರೊಂದಿಗೆ ಚರ್ಚಿಸುವ ರೆಂದರೆ ವಿಚಿತ್ರವಾಗಿದೆ. ಆ ಸಂಗತಿ ನನಗೆ ಹೇಳದೆ ಅಡಗಿಸಿಡುವರೆಂದರೆ ಇನ್ನಿಷ್ಟು ವಿಚಿತ್ರವಾಗಿದೆ.



ಏನೇನೋ ಸಂದೇಹವೂ ಏಳುತ್ತದೆ!'' ಎಂದನು ವಾಚಸ್ಪತ್ಯಾಚಾರ್ಯನು ಚಿಂತೆಯ ಮುಖದಲ್ಲಿ.

"ಹಾಗೇನು ವಿಷಯ? ಇದಕ್ಕೆ ನಾನೇನು ಹೇಳಲಿ? ಜಗತ್ಪತ್ಯಾಚಾರ್ಯರು ನಂಬುಗೆಗೆ ಅರ್ಹರೋ ಅಲ್ಲವೋ ಎಂಬುದು ನಿಮಗೇ ಗೊತ್ತು. ಏನೋ ಶುಭ ನಿರೀಕ್ಷೆ ಮಾಡೋಣ. ಅವರೇನಾದರೂ ಇತರ ಪಂಡಿತರೊಡನೆ ಮಥಿಸಿ ಶುಭ ವಾರ್ತೆ ತರುವರೋ ಎಂದು ಕಾದು ನೋಡೋಣ! ಅವಸರ ಪಟ್ಟು ಕೆಟ್ಟ ಸಂದೇಹ ಪಡುವುದು ಒಳ್ಳೇದಲ್ಲ'' ಎಂದನು ರಾಜ.

"ಇದುವರೆಗೂ ಜಗತ್ಪತ್ಯಾಚಾರ್ಯರನ್ನು ಸಂದೇ ಹಿಸುವ ಸಂದರ್ಭ ಬರಲಿಲ್ಲ. ಈಗ ಅವರು ಬೇರೆ ಪಂಡಿತರೊಂದಿಗೆ ಚರ್ಚಿಸಿ, ತಿಳಿದುದನ್ನು ನನಗೆ ಹೇಳದೆ ಬಚ್ಚಿಡುವುದೆಂದರೆ ಅವರನ್ನು ಅನುಮಾನಿಸ ಬೇಕಾಗಿ ಬಂದಿದೆ. ಈಗ ಅವರು ಎಲ್ಲಿದ್ದಾರೆ?



ಪೂರ್ವೋತ್ತರಗಳನ್ನೂ ತಿಳಿದುಕೊಂಡು ಬರಲು ಎಷ್ಟೋ ಪ್ರಯತ್ನ ಮಾಡಿದೆನು. ಆದರೆ ಪ್ರಯೋಜನವಾಗಲಿಲ್ಲ. ಅವನೊಬ್ಬ ವಿಚಿತ್ರದವನಾಗಿದ್ದಾನೆ. ಅವನೊಂದಿಗೆ ಜಾಗರೂಕತೆಯಿಂದ ವ್ಯವಹರಿಸಬೇಕೆಂಬುದಷ್ಟು ಮಾತ್ರ ಗೊತ್ತಾಗಿದೆ. ಅದನ್ನೆಲ್ಲಾ ಪ್ರಭುಗಳ ಚಿತ್ತಕ್ಕೆ ಹೇಳಿ ಕಳವಳಪಡಿಸಬೇಡವೆಂದುಕೊಂಡಿರುವಾಗ ವಾಚಸ್ಪತ್ಯಾಚಾರ್ಯರವರ ಬಾಯಿಯಿಂದಲೇ ಅವನ ಬಗ್ಗೆ ಸಂದೇಹ ಬಯಲಿಗೆ ಬಂತು'' ಎಂದನು.

"ಸರಿ, ನೋಡೋಣ. ಈ ಮಹೇಂದ್ರನಾಥನಿಂದ ಏನಾದರೂ ವಾರ್ತೆ ಬಂದಿದೆಯೋ? ಅವನ ತಾಯಿ ಕ್ಷೇಮವಾಗಿದ್ದಾಳೆ ತಾನೇ? ನಾವೆಲ್ಲಾ ಅವನನ್ನು ತಾನೇ ತುಂಬಾ ನಂಬಿದ್ದೇವೆ?'' ಎಂದು ಕೇಳಿದನು ರಾಜ ಮನಸ್ಸನ್ನು ಬೇರೆ ಕಡೆಗೆ ತಿರುಗಿಸುವವನಂತೆ.

"ಆಕೆಗೆ ಯಾವ ಕೊರತೆಯೂ ಇಲ್ಲದಂತೆ ನೋಡಿಕೊಳ್ಳುತ್ತಿದ್ದೇನೆ. ಯಾಕೋ ಮಹೇಂದ್ರನಾಥನು ಇನ್ನೂ ಹಿಂದಿರುಗಿ ಬರಲಿಲ್ಲ. ಅವನ ತಾಯಿ ಕೂಡ ಮಗನ ನಿರೀಕ್ಷೆಯಲ್ಲಿದ್ದಾಳೆ'' ಎಂದನು ಉಗ್ರಸೇನ.

"ನನಗೇನೋ ಆ ಯುವಕನು ವಿದ್ಯಾವತಿಯ ಜಾಡು ತಿಳಿದೇ ಬರುವನೆಂಬ ನಂಬುಗೆ ಬಲವಾಗಿದೆ. ಅರ್ಧಂಬರ್ಧ ಸಮಾಚಾರ ತಂದು ಸಮಯ ಹಾಳು ಮಾಡುವವನಲ್ಲ ಆ ಯುವಕ. ವಿದ್ಯಾವತಿಯ ಹೆತ್ತವರಾದ ನಮ್ಮಿಬ್ಬರ ನಂಬುಗೆಯೂ ಆ ಯುವಕನ ಮೇಲೆಯೇ ಇದೆ'' ಎಂದನು ರಾಜ.

ಏನು ಮಾಡುತ್ತಿದ್ದಾರೆ? ಎಂಬುದನ್ನೆಲ್ಲ ನಾನೇ ಶೋಧ ಮಾಡಿ ತಿಳಿದು ಮಥಿತಾಂಶ ಹೇಳಲು ಆದಷ್ಟು ಬೇಗದಲ್ಲಿ ನಿಮ್ಮ ಹತ್ತಿರ ಬರುತ್ತೇನೆ'' ಎಂದು ಹೇಳಿ ವಾಚಸ್ಪತ್ಯಾಚಾರ್ಯನು ರಾಜನಿಂದ ಅಪ್ಪಣೆ ಪಡೆದು, ಶಿಷ್ಯನೊಂದಿಗೆ ಅಲ್ಲಿಂದ ಹೊರಟು ಹೋದನು.

ಆಮೇಲೆ ರಾಜನು ವಾಚಸ್ಪತಿ ಹೇಳಿದ ಸಮಾಚಾರವನ್ನು ಸೇನಾಪತಿ ಉಗ್ರಸೇನನೊಂದಿಗೆ ಹೇಳಿದನು. ಉಗ್ರಸೇನನು ಯೋಚಿಸಿ, "ಯುವರಾಣಿಯ ಜಾತಕದ ಮೇಲೆ ಜಗತ್ಪತಿ ತೋರಿಸುವ ಅತ್ಯಾಸಕ್ತಿಯನ್ನು ನೋಡಿದರೆ, ಮೊದಲೇ ಅವನ ಮೇಲೆ ನನಗೆ ಅನುಮಾನ ಬಂದಿತ್ತು. ಯುವರಾಣಿ ಕಾಣದೆ ಹೋದ ಮೇಲೆ ಅನುಮಾನವು ಇನ್ನಷ್ಟು ಹೆಚ್ಚಾಯಿತು. ಇದರಲ್ಲೇನೋ ವಿಶೇಷವಿರಬೇಕು ಅನಿಸಿತು. ಅವನ ನಿವಾಸ ಸ್ಥಳವನ್ನೂ, ಹುಟ್ಟು

* * * *

ರಾತ್ರಿ ಪೂರಾ ಎಚ್ಚರದಲ್ಲಿದ್ದರೂ ಮಹೇಂದ್ರನಾಥನಿಗೆ ಕಷ್ಟವೆನಿಸಲಿಲ್ಲ. ಅವನು ದ್ವಾರದ ಹತ್ತಿರ ಸ್ವಲ್ಪ ಹೊತ್ತು ಕುಳಿತಿದ್ದು, ಆಮೇಲೆ ದ್ವಾರಕ್ಕೂ, ಉದ್ಯಾನವನಕ್ಕೂ ನಡುವೆ ಇರುವ

ಮಾರ್ಗದಲ್ಲಿ ಮೆಲ್ಲನೆ ನಡೆಯುತ್ತಾ ಸ್ವಲ್ಪ ದೂರ ಹೋಗಿ ಸುತ್ತುಮುತ್ತಲೂ ನೋಡಿದನು.

ಭವನದ ಕೆಳಗಿನ ಕೋಣೆಗಳಲ್ಲೆಲ್ಲಾ ಬೆಳಕು ಕಾಣಿಸುತ್ತಿತ್ತು. ಆದರೆ ಮೇಲಿನ ಅಂತಸ್ತಿನಲ್ಲಿರುವ ಒಂದೆರಡು ಕೋಣೆಗಳಲ್ಲಿ ಮಾತ್ರವೇ ದೀಪ ಬೆಳಗುತ್ತಿತ್ತು. ರಾತ್ರಿ ಕಳೆದ ಮೇಲೆ ಕೆಳಗಿನ ಭಾಗದ ಕೋಣೆಗಳಲ್ಲಿ ದೀಪಗಳು ಆರಿ ಹೋದುವು. ಮೇಲುಭಾಗದಲ್ಲಿರುವ ಎರಡು ಕೋಣೆಗಳಲ್ಲಿ ಬೆಳಕು ಬಹಳ ಹೊತ್ತಿನವರೆಗೆ ಕಾಣಿಸಿತು.

ಆಮೇಲೆ ಆ ಕೋಣೆಗಳ ದೀಪಗಳು ಕೂಡಾ ಆರಿ ಹೋದುವು. ಸುತ್ತಲೂ ಗಾಢವಾದ ಕಗ್ಗತ್ತಲೆ! ವಾತಾವರಣವೆಲ್ಲಾ ಬಿಕೋ ಅನಿಸುವಂತಾಯಿತು!

ಮತ್ತೆ ಬೆಳಗಾಗುತ್ತಾ ಬರುವಾಗ, ಅಲ್ಲಿಗೆ ದ್ವಾರಪಾಲ ನಾಯಕನು ಬಂದು ಅವನನ್ನು ಭವನದ ದಕ್ಷಿಣ ಭಾಗದ ಕೋಣೆಗೆ ಕರೆದುಕೊಂಡು ಹೋದನು. ಅಲ್ಲೊಂದು ವಿಶಾಲವಾದ ಭೋಜನ ಶಾಲೆ ಇದ್ದಿತು. ಮಹೇಂದ್ರನಾಥನು ಊಟ ಮಾಡುತ್ತ ಪಕ್ಕಕ್ಕೆ ತಲೆ ತಿರುಗಿಸಿ ನೋಡಿದನು. ಬಿಳೀ ಸೀರೆ ಉಟ್ಟು ಕೊಂಡು ತಲೆಗೆ ಮುಸುಕು ಹಾಕಿದ ವೃದ್ಧೆ ಒಬ್ಬಳು ಅಡಿಗೇ ಕೋಣೆಯಿಂದ ಹೊರಗೆ ಬಂದುದು ಕಂಡಿತು. ಅವಳ ಹಿಂದೆ ಇಬ್ಬರು ಪರಿಚಾರಿಕೆಯರು ಎರಡು ಹರಿವಾಣಗಳಲ್ಲಿ ತುಂಬಾ ಆಹಾರ ಪಾನೀಯಗಳನ್ನು ತೆಗೆದುಕೊಂಡು ಹೋಗುತ್ತಿದ್ದರು. ಆ ಇಬ್ಬರು ಪರಿಚಾರಿಕೆಯರು ಕೂಡಾ ಒಂದೇ ವಿಧವಾದ ಬಟ್ಟೆಬರೆ ಆಭರಣಗಳನ್ನು ಧರಿಸಿರುವುದನ್ನು ನೋಡಿ ಆಶ್ಚರ್ಯಪಟ್ಟ ಮಹೇಂದ್ರನಾಥನು ಬೇಗನೇ ಊಟ ಮುಗಿಸಿ, ವಿಶ್ರಾಂತಿ ಪಡೆಯಲು ಹೊರಗಿನ ಕೋಣೆಗೆ ಹೋದನು. ಆದರೆ ವಿಶ್ರಾಂತಿಯ ಅರೆ ನಿದ್ದೆ ಕೂಡಾ ಬಹು ದೂರ ಓಡಿತು.

ಸೂರ್ಯನು ಪಶ್ಚಿಮ ದಿಶೆಯಲ್ಲಿ ಮಾಲುತ್ತಿರುವಾಗ ಮಹೇಂದ್ರನಾಥನು ನಿದ್ದೆಯಿಂದೆದ್ದು, ಇನ್ನು





ತಡಮಾಡಬಾರದೆಂದುಕೊಂಡು, ತಾನು ಕಾವಲಿರ ಬೇಕಾದ ಭವನದ ಆಚೆಯ ದ್ವಾರಕ್ಕೆ ಹೋದನು.

ಸೂರ್ಯನು ಮುಳುಗಲು ಸ್ವಲ್ಪ ಹೊತ್ತಿರುವಾಗ, ಮಹೇಂದ್ರನಾಥನು ತಾನು ಕುಳಿತುಕೊಂಡ ಬಂಡೆಯ ಬುಡದಿಂದ ಅದರ ಮೇಲೆ ಹತ್ತಿ ನಿಂತು ನೋಡಿದನು.

ದೂರದಲ್ಲಿ ಭವನದ ಮೆಟ್ಟಲಿನ ಸ್ವಲ್ಪ ಭಾಗವಲ್ಲದೆ ಬೇರೇನೂ ಕಾಣಲಿಲ್ಲ. ಉದ್ಯಾನವನದಲ್ಲಿ ಏನೋ ಸಪ್ಪಳಗಳು ಕೇಳಿಸಿದ್ದರಿಂದ ಅವನು ಆ ಕಡೆಗೆ ಹೋದನು. ಅಲ್ಲಿ ಅವನಿಗೆ ಬೆಳಿಗ್ಗೆ ಭೋಜನಶಾಲೆಯಲ್ಲಿ ಕಾಣಿಸಿದ ವೃದ್ಧ ಸ್ತ್ರೀ ಕಾಣಿಸಿದಳು. ಅವಳ ಹಿಂದೆ ಸ್ವಲ್ಪ ದೂರದಲ್ಲಿ ಸುಂದರಿಯಾದ ಯುವತಿ ಉದ್ಯಾನವನದ ಪುಷ್ಪಗಳನ್ನು ಮುಟ್ಟುತ್ತಾ ಮೂಸುತ್ತಾ ಯಾರೋ ಒತ್ತಾಯಿಸುವಂತಹ ಬೇಸರದಲ್ಲಿ ನಡೆಯುತ್ತಿದ್ದಳು. ಮಹೇಂದ್ರನಾಥನು ಬೆಳಿಗ್ಗೆ ನೋಡಿದ ಪರಿಚಾರಿಕೆಯರ ಹಾಗೆಯೇ ಯುವತಿಯ ದುಸ್ತುಗಳೂ ಆಭರಣಗಳೂ ಇದ್ದುವು. ಆದರೆ ಇವಳು ಅವರ ಹಾಗಿರದೆ ಅತ್ಯದ್ಭುತವಾದ ಸೌಂದರ್ಯವತಿಯಾಗಿದ್ದಳು. ಅವಳ ಮುಖ ಈಚೆಗೆ ತಿರುಗದೆ ಇದ್ದುದರಿಂದ ಮಥಿಸಿತು ಮಹೇಂದ್ರನಾಥನ ಮನಸ್ಸು.

ಮಹೇಂದ್ರನಾಥನು ಏನೋ ಕೆಲಸದಲ್ಲಿರುವವನ ಹಾಗೆ ಮುಂದಕ್ಕೂ, ಹಿಂದಕ್ಕೂ ನಡೆಯುತ್ತಾ, ಯಾರಿಗೂ ಅನುಮಾನವಾಗದಂತೆ, ಅವರನ್ನು ಗಮನಿಸುತ್ತಿದ್ದನು. ಅವರಿಬ್ಬರೂ ಒಬ್ಬರೊಡನೆ ಒಬ್ಬರು ಮಾತಾಡುತ್ತಿರಲಿಲ್ಲ. ವೃದ್ಧ ಸ್ತ್ರೀ ಒಂದು ಕಡೆ ಕುಳಿತುಕೊಂಡು ವನವಿಹಾರ ಮಾಡುವ ಸೌಂದರ್ಯಶಾಲಿನಿಯನ್ನು ಗಮನಿಸುತ್ತ ಬಹು ಜಾಗರೂಕತೆಯಲ್ಲಿದ್ದಳು. ಸ್ವಲ್ಪ ಸಮಯದ ಮೇಲೆ ಮತ್ತೊಬ್ಬಳು ಯುವತಿ ಉದ್ಯಾನದೊಳಗೆ ಬಂದು ವೃದ್ಧ ಸ್ತ್ರೀಯೊಡನೆ ಏನೋ ಹೇಳಿದಳು.

ಕೂಡಲೇ ವೃದ್ಧೆ ಭವನದೊಳಗೆ ಹೋದಳು. ಬಂದ ಯುವತಿ ಉದ್ಯಾನದಲ್ಲಿರುವ ವಿಹರಿಸುವಂತೆ ಸೌಂದರ್ಯವತಿಯನ್ನು ಸಮೀಪಿಸಿದಳು. ಅವರಿಬ್ಬರ ಬಟ್ಟೆಗಳೂ ಆಭರಣಗಳೂ ಒಂದೇ ಬಗೆಯವಾಗಿದ್ದವು. ಸ್ವಲ್ಪ ಹೊತ್ತು ಇಬ್ಬರೂ ಅಲ್ಲಿಯೇ ಇದ್ದು ಕತ್ತಲೆ ಬರುತ್ತಾ ಇರುವಾಗ ಯುವತಿ, ಸೌಂದರ್ಯಶಾಲಿನಿಯನ್ನು ಭವನದೊಳಗೆ ಕರೆದುಕೊಂಡು ಹೋದಳು.

ಅವರು ಹೋದ ಕೂಡಲೇ ಭವನದ ಮೇಲ್ಭಾಗದ ಒಂದು ಕೋಣೆಯ ದೀಪಗಳು ಬೆಳಗಿದುವು. ಆದರೆ ಆ ಕೋಣೆ ಕಳೆದ ರಾತ್ರಿ ದೀಪ ಬೆಳಗಿದ ಕೋಣೆಯಲ್ಲವೆಂದು ಮಹೇಂದ್ರನಾಥನಿಗೆ ಕೂಡಲೇ ಗೊತ್ತಾಗಿ ಕುತೂಹಲ ಇಮ್ಮಡಿಸಿತು.

ಅನಂತರ ಬಹಳ ಹೊತ್ತಾದ ಮೇಲೆ ದ್ವಾರ

ರಕ್ಷಕ ನಾಯಕನನ್ನು ನೋಡಿ ಮಹೇಂದ್ರನಾಥನು ಯಥಾಲಾಪವಾಗಿ, "ಈ ಪ್ರಾಂತ್ಯವೆಲ್ಲಾ ತುಂಬಾ ನಿಶ್ಶಬ್ಧವಾಗಿದೆ. ಯಜಮಾನರು ಇಲ್ಲಿಂದ ಹೊರಟು ಹೋದ ಹಾಗಿದೆ ಅಲ್ಲವಾ?" ಎಂದು ಕೇಳಿದನು.

"ಇಲ್ಲ, ಇಲ್ಲ. ಯಜಮಾನರು ಇಲ್ಲಿಯೇ ಇದ್ದಾರೆ. ಅವರು ರಾತ್ರಿ ಹಗಲೂ ಜ್ಯೋತಿಷ್ಕರೊಂದಿಗೆ ಚರ್ಚೆ ನಡೆಸಿಕೊಂಡಿದ್ದಾರೆ. ಆದ್ದರಿಂದ ನೀನು ತುಂಬಾ ಜಾಗರೂಕತೆಯಿಂದ ಇರು. ಯಜಮಾನರು ಈ ಕಡೆಗೆ ಬರುವುದಿಲ್ಲ. ಎಚ್ಚರಿಕೆಯಿಂದಿರು! ನಿದ್ರಿಸಿ ಬಿಡಬೇಡಪ್ಪಾ!" ಎಂದು ಎಚ್ಚರಿಸಿದನು.

"ನಾನು ಇಲ್ಲಿ ಕಾವಲಿದ್ದೇನೆ ಅಂತ ಯಜಮಾನರಿಗೆ ಗೊತ್ತಿದೆಯೇ?" ಎಂದು ಕೇಳಿ ಮಹೇಂದ್ರನಾಥನು ಕೈ ತೊಳೆದು ಬಂದು ಊಟಕ್ಕೆ ಕುಳಿತನು.

"ಗೊತ್ತಿದೆ. ನಿನ್ನ ಹೊಸಬನನ್ನು ನಿಯಮಿಸಬೇಕೆಂದು ಅವರೇ ಹೇಳಿದ್ದು. ಇನ್ನೊಂದು ಮುಖ್ಯ ವಿಷಯ. ಏನೆಂದರೆ, ಈಗ ಈ ಭವನಕ್ಕೆ ಬಂದ ಮುಖ್ಯಳಾದವಳೊಬ್ಬಳು ಯಾವುದೋ ರಾಜ್ಯದ ಯುವರಾಣಿ ಎಂದು ಹೇಳುತ್ತಿದ್ದಾರೆ. ಅವಳು ಇಲ್ಲಿಯೇ ಸ್ವಲ್ಪ ಕಾಲ ಇರುತ್ತಾಳಂತೆ. ಆದ್ದರಿಂದ ನೀನು ಇನ್ನಿಷ್ಟು ಜಾಗರೂಕತೆಯಿಂದ ಕಣ್ಣಿಗೆ ಎಣ್ಣೆ ಹಾಕಿ ಕಾವಲು ಕಾಯಬೇಕು. ಇಲ್ಲಿಯ ಭದ್ರತೆ ನೋಡಲು ಯಜಮಾನರು ಬರಲಿಕ್ಕೂ ಸಾಕು!" ಎಂದು ಹೇಳಿದನು ದ್ವಾರಪಾಲಕರ ನಾಯಕ.

"ಗೊತ್ತಾಯಿತು, ಗೊತ್ತಾಯಿತು. ಒಂದು ವೇಳೆ ಯಜಮಾನರು ಈ ಕಡೆಗೆ ಬಂದರೂ ಬರಬಹುದಷ್ಟೇ! ನಾನು ಬಹು ಜಾಗ್ರತೆಯಾಗಿ ನೋಡುತ್ತೇನೆ. ಆ ಚಿಂತೆಯೇ ನಿಮಗೆ ಬೇಡ" ಎಂದನು ಮಹೇಂದ್ರನಾಥ.

ದ್ವಾರಪಾಲಕನು ಅಲ್ಲಿಂದ ಹೋದ ಮೇಲೆ ಮಹೇಂದ್ರನಾಥನು ಮೆಲ್ಲನೆ ಉದ್ಯಾನವನಕ್ಕೆ ಹೋದನು.

ಅಲ್ಲಿಂದ ನೋಡಿದರೆ ಭವನವು ಸ್ಪಷ್ಟವಾಗಿ ಕಾಣುತ್ತಿತ್ತು. ಬಾಗಿಲುಗಳೆಲ್ಲಾ ಮುಚ್ಚಿಕೊಂಡಿದ್ದುವು. ಭವನದ ಕೆಳ ಭಾಗದ ಕಿಟಕಿಯ ಬಾಗಿಲುಗಳು ಕೂಡಾ ಮುಚ್ಚಿದ್ದುವು. ಎಲ್ಲಿಯೂ ಮನುಷ್ಯರ ಜಾಡು ಇಲ್ಲ. ಭವನದ ಮೇಲಂತಸ್ತಿನ ಕಿಟಕೀ ಬಾಗಿಲುಗಳು ತೆರೆದಿದ್ದುವು.

ಮಹೇಂದ್ರನಾಥನು ಯುವರಾಣಿಯನ್ನು ಕಂಡು ಹಿಡಿಯಲು ಏನು ಉಪಾಯ ಮಾಡುವುದೆಂದು ಯೋಚಿಸುತ್ತಾ ಹಿಂದಿರುಗಿ ದ್ವಾರದ ಹತ್ತಿರ ಬಂದು ತನ್ನ ಆಸನದಲ್ಲಿ ಕುಳಿತುಕೊಂಡನು. ಸಮಯ ಸಾಗುತ್ತಿದ್ದಿತು.

–(ಇನ್ನೂ ಇದೆ)





# ಮಾಯಾಭವನ

೧೦

[ಯುವರಾಣಿ ವಿದ್ಯಾವತಿ ಕಾಣದೇ ಹೋದ ದಿನದಿಂದಲೂ ತನ್ನ ಬಳಿಗೆ ಬಾರದಿದ್ದ ಜಗತ್ಪತಿಯ ಪ್ರವರ್ತನೆಯಿಂದ ವಾಚಸ್ಪತ್ಯಾಚಾರ್ಯನಿಗೆ ಅನುಮಾನ ಉಂಟಾಗಿ, ಅವನು ಆ ಸಂಗತಿಯನ್ನು ರಾಜನಿಗೆ ತಿಳಿಯಪಡಿಸಿದನು. ಯುವರಾಣಿಯನ್ನು ಹುಡುಕಲಿಕ್ಕೆ ಹೋದ ಮಹೇಂದ್ರನಾಥನು ಅರಣ್ಯಮಧ್ಯದಲ್ಲಿರುವ ಮಾಯಾಭವನದ ಕಾವಲುಗಾರನಾಗಿ ಸೇರಿ, ಅಲ್ಲಿಯ ಪರಿಸರಗಳನ್ನು ಬಹು ಜಾಗರೂಕತೆಯಿಂದ ಪರಿಶೀಲಿಸತೊಡಗಿದನು. ಅನಂತರ—]

ಮರುದಿನ ಸಾಯಂಕಾಲ ಮಹೇಂದ್ರನಾಥನು ಮೊದಲೇ ತಾನು ಕಾವಲು ಕಾಯಬೇಕಾದ ಆಚೆಯ ಬದಿಗೆ ಕಾವಲು ಕಾಯಲು ಅಲ್ಲಿಗೆ ಹೋಗಿ ಸೇರಿದನು. ಮಾಯಾಭವನದೊಳಗಿನಿಂದ ಯಾರಾದರೂ ಹೊರಗೆ ಬರುವರೇನೋ ಎಂದು ಕ್ಷಣಕ್ಷಣಕ್ಕೂ ಉದ್ಯಾನವನದ ಕಡೆಗೆ ನೋಡಿಕೊಂಡಿದ್ದನು. ಸ್ವಲ್ಪ ಹೊತ್ತಿಗೆ ಮೂವರು ಯುವತಿಯರು ಭವನದೊಳಗಿನಿಂದ ಒಂದೇ ವಿಧವಾದ ದುಸ್ತುಗಳಿಂದ ಆಭರಣಗಳಿಂದ ಇದ್ದುದರಿಂದ, ಹಾವಭಾವಗಳಿಂದ ಇದ್ದುದರಿಂದ ನಿನ್ನೆ ಕಂಡ ಸುಂದರ ಯುವತಿಯರಲ್ಲಿ ಯುವರಾಣಿ ಯಾರೆಂಬುದನ್ನು ಕಂಡು ಹಿಡಿಯಲು ಮಹೇಂದ್ರನಾಥನಿಂದ ಸಾಧ್ಯವಾಗಲಿಲ್ಲ. ಸ್ವಲ್ಪ ಹೊತ್ತಿನಲ್ಲಿ ಯುವತಿಯೊಬ್ಬಳೇ ಮುಂದಕ್ಕೆ ಹೋಗಿ ಮುಂದೆಯೂ, ಹಿಂದೆಯೂ ಉದ್ಯಾನವನದಲ್ಲಿ ವಿಹರಿಸತೊಡಗಿದಳು. ಮತ್ತೊಬ್ಬಳು ಯುವತಿ ಇನ್ನೊಂದು ಕಡೆಯಲ್ಲಿ ಕುಳಿತುಕೊಂಡಳು.

ಮಹೇಂದ್ರನಾಥನು ಒಂದು ಮರದ ಮರೆಯಲ್ಲಿ ಅಡಗಿ ನಿಂತು ಆ ಯುವತಿ ಆ ಕಡೆಗೆ ಮತ್ತೆ



ಕಡೆಗೆ ನಡೆಯತೊಡಗಿದಳು.

ಆ ದಿನ ರಾತ್ರಿ ಮಹೇಂದ್ರನಾಥನು ಇನ್ನಿಷ್ಟು ಜಾಗ್ರತೆಯಿಂದ ಕಾವಲು ಕಾಯತೊಡಗಿದನು.

ಮಾಯಾಭವನದ ಒಂದೇ ಒಂದು ಕೋಣೆಯೊಳಗೆ ಮಾತ್ರ ದೀಪಗಳು ಬೆಳಗುತ್ತಿದ್ದವು. ಆದರೆ ಅದು ನಿನ್ನೆ ದೀಪ ಬೆಳಗಿದ ಕೋಣೆ ಅಲ್ಲ. ಅಂದರೆ ಉದ್ಯಾನವನದಿಂದ ತಿರುಗಿ ಹೋದ ಆ ಯುವತಿ ಒಂದೊಂದು ದಿನ ಒಂದೊಂದು ಕೋಣೆಯಲ್ಲಿ ಇರುವ ಹಾಗೆ ಏರ್ಪಾಡು ನಡೆದಿತ್ತು ಎಂದು ಮಹೇಂದ್ರನಿಗೆ ಗ್ರಹಿಕೆಯಾಯಿತು. ಅಲ್ಲದೆ ಮೂವರು ಯುವತಿಯರೂ ಒಂದೇ ವಿಧವಾಗಿ ದುಸ್ತುಗಳನ್ನೂ, ಆಭರಣಗಳನ್ನೂ ಧರಿಸಿರುವಂತೆ ಮಾಡಿದ್ದರಿಂದ ಅದು ಹೊಸಬರಾರಿಗೂ ಯುವರಾಣಿಯ ಗುರುತು ಗೊತ್ತಾಗದಂತೆ ಮಾಡುವ ಉಪಾಯವೆಂದಾಯಿತು.

ಹೀಗೆ ಮಹೇಂದ್ರನಾಥನು ಇದು ಸಾರ್ಥಕ ಹೆಸರಿನ ಮಾಯಾಭವನವೆಂದು ಅಂದುಕೊಂಡು ನೋಡುತ್ತಾ ಕುಳಿತಿದ್ದಾಗ, ದ್ವಾರಪಾಲಕನು ಬಂದು ದನ್ನು ನೋಡಿ, "ಮಿತ್ರಾ, ಈ ದಿನವಿಡೀ ನಿಮ್ಮನ್ನು ನೋಡಲೇ ಇಲ್ಲ. ಏನೋ ದೊಡ್ಡ ವಿಶೇಷವಿದ್ದಿರಬೇಕು. ಏನು ವಿಶೇಷವೋ?'' ಎಂದು ಸಣ್ಣದಾಗಿ ಮುಗುಳು ನಗುತ್ತಾ ಕೇಳಿದನು.

"ಏನೋ ವಿಶೇಷವೇ ಇದೆಯಪ್ಪಾ, ಈ ದಿನ ಮತ್ತೆ ಕೆಲವು ಪಂಡಿತರು ಬಂದರು. ಬಂದವರನ್ನು ಕೂಡಲೇ ಯಜಮಾನರ ಹತ್ತಿರ ಕರೆದುಕೊಂಡು ಹೋಗಬೇಕಾದ್ದು ನನ್ನ ಕಾರ್ಯ ತಾನೇ? ಆದ್ದರಿಂದ ಅಲ್ಲೇ ನೋಡಿಕೊಂಡಿರಬೇಕಾಯಿತು. ನೀನು ಕೂಡಾ ಇಲ್ಲಿ ಅತ್ಯಂತ ಜಾಗರೂಕನಾಗಿರು'' ಎಂದು ಹೇಳಿ ತನ್ನ ಕಾರ್ಯಕ್ಕೆ ಅವಸರದಿಂದ ಹೋಗಿ ಬಿಟ್ಟನು ದ್ವಾರಪಾಲಕ.

ಬಂದಾಗ ಅವಳ ಹೆಸರು ಹೇಳಿ ಕರೆದನು. ವಿದ್ಯಾವತಿ ಮೆಲ್ಲನೆ ನಡೆಯುತ್ತಾ ಮರವನ್ನು ದಾಟಿ ಮುಂದಕ್ಕೆ ಹೋಗಿ ಮತ್ತೆ ಹಿಂದಕ್ಕೆ ಬಂದು ಮರದ ಹತ್ತಿರ ನಿಂತಳು. ಅವಳಿಗೆ ತನ್ನನ್ನು ಭವನದೊಳಗಿನ ಯಾರೋ ನೋಡುತ್ತಿರುವರೇನೋ ಎಂಬ ಅಂಜಿಕೆ.

ಮಹೇಂದ್ರನಾಥನು ಮರದ ಮರೆಯಲ್ಲಿ ನಾಲ್ಕು ಸುತ್ತಲೂ ನೋಡಿದನು. ಯಾರೂ ಕಾಣದಿರಲು ಏನೋ ಹೇಳಲು ಬಾಯಿ ತೆರೆದನು. ಕೂಡಲೇ ಯುವತಿ ಗಟ್ಟಿ ಮಾತಾಡಬೇಡವೆಂದು ತನ್ನ ಬಾಯಿಗೆ ಬೆರಳಿಟ್ಟು ಎಚ್ಚರಿಸಿದಳು.

ಆಗ ದೂರದಲ್ಲಿ ಕುಳಿತಿದ್ದ ಪರಿಚಾರಿಕೆ ಎದ್ದು ವೇಗವಾಗಿ ತನ್ನ ಕಡೆಗೆ ಬರುವುದನ್ನು ನೋಡಿ ಆಕಾಶದ ಕಡೆಗೆ ನೋಡುತ್ತ "ನಾಳೆ'' ಎಂದು ಮಹೇಂದ್ರನಾಥನಿಗೆ ಹೇಳಿ ನೆಟ್ಟಗೆ ಭವನದ

ಮರುದಿನ ಬೆಳಿಗ್ಗೆ ಕೂಡಾ ಅಡಿಗೇಮನೆಯಿಂದ ಇಬ್ಬರು ಪರಿಚಾರಿಕೆಯರು ಆಹಾರ ಪಾನೀಯಗಳನ್ನು ಹಿಡಿದುಕೊಂಡು ಹೋಗುವುದನ್ನು ಮಹೇಂದ್ರನಾಥನು ಗಮನಿಸಿದನು. ಆಗ ಅವರ ಹಿಂದೆ ವೃದ್ಧ ಸ್ತ್ರೀ ಇರಲಿಲ್ಲ. ಅದೂ ಒಂದು ವಿಶೇಷವೆನಿಸಿತು ಮಹೇಂದ್ರನಾಥನಿಗೆ.

ಆ ದಿನ ಸಾಯಂಕಾಲ ಆ ಯುವತಿ ಸ್ವಲ್ಪ ಮುಂದಾಗಿಯೇ ವನವಿಹಾರಕ್ಕೆ ಬಂದಳು. ಅವಳ ಹಿಂದೆ ಒಬ್ಬಳು ಪರಿಚಾರಿಕೆ ಮಾತ್ರವೇ ಇದ್ದಳು. ಇಬ್ಬರೂ ಕೂಡಿ ಸ್ವಲ್ಪ ಹೊತ್ತು ವನದಲ್ಲಿ ಅತ್ತಲೂ ಇತ್ತಲೂ ತಿರುಗಿದರು. ಸ್ವಲ್ಪ ಹೊತ್ತು ತಿರುಗಾಡಿ ಪರಿಚಾರಿಕೆ ಒಂದು ಕಡೆ ಕುಳಿತಳು. ಆ ಯುವತಿ ಅಗಲವಾದ ದೊಡ್ಡ ಮರದ ಕಡೆಗೆ ಯಾರನ್ನೋ ನಿರೀಕ್ಷಿಸುವವಳ ಹಾಗೆ ನೋಡಿ ಮುಂದೆ ಹೋದಳು. ಮತ್ತೆ ಅವಳು ಆ ಕಡೆಗೆ ಬಂದಾಗ "ಯುವರಾಣಿ, ನಾನು ಮಹೇಂದ್ರನಾಥ. ನಿನ್ನೆ ನಿನ್ನನ್ನು ಹುಡುಕಿಕೊಂಡು ಬಂದವನು ನಾನೇ. ನೀನು ಈ ಮರವನ್ನು ಸಂದೇಹದಿಂದ ನೋಡುವ ಹಾಗೆ ಕಾಣುತ್ತದೆ. ನೀನು ವೀರಗಿರಿಯ ಯುವರಾಣಿ ವಿದ್ಯಾವತಿ ತಾನೇ? ವೀರಗಿರಿಯಿಂದ ನಿನ್ನನ್ನು ಹುಡುಕಿಕೊಂಡು ಬಂದಿದ್ದೇನೆ'' ಎಂದನು ಮರದ ಮರೆಯಲ್ಲಿ ಅಡಗಿದ್ದ ಮಹೇಂದ್ರನಾಥ.

ಆ ಯುವತಿ ಅವನ ಮಾತು ಕೇಳಿದರೂ ಅಲ್ಲಿ ನಿಲ್ಲಲಿಲ್ಲ. ಸ್ವಲ್ಪ ದೂರ ಹೋಗಿ ಮರಳಿ ಬಂದು, "ಹೌದು, ನಾನು ಯುವರಾಣಿ ವಿದ್ಯಾವತಿಯೇ. ಹೇಗಾದರೂ ಇಲ್ಲಿಂದ ಹೊರಬಿದ್ದರೆ ಸಾಕು ನನಗೆ'' ಎಂದಳು ಮೆಲ್ಲನೆಯಿಂದ.

"ಯುವರಾಣೀ! ನಿನ್ನನ್ನು ಇಲ್ಲಿಗೆ ಅಪಹರಿಸಿ ತಂದವರು ಯಾರು?'' ಎಂದು ಕೇಳಿದನು ಮಹೇಂದ್ರನಾಥ.




"ನನಗೆ ಗೊತ್ತಿಲ್ಲ. ಆ ಸಂಗತಿ ಒಬ್ಬಳು ವೃದ್ಧಸ್ತ್ರೀಗೆ ಮಾತ್ರವೇ ಗೊತ್ತಿದೆ. ಅವಳು ನನಗೆ ಹೇಳುವುದಿಲ್ಲ. ಏಕೆಂದರೆ ನಾನು ಗಲಾಟೆ ಮಾಡುವೆನೆಂಬ ಭಯ!'' ಎಂದಳು ವಿದ್ಯಾವತಿ.

"ಅವಳು ಯಾರು? ಎಲ್ಲಿರುತ್ತಾಳೆ?'' ಎಂದು ಮಹೇಂದ್ರನಾಥನು ಕೇಳಿದನು.

"ಅವಳೇನೋ ತನ್ನ ಹೆಸರು ಕಮಲ ಎಂದು ಹೇಳಿಕೊಳ್ಳುತ್ತಾಳೆ. ಅವಳ ರೂಪವೇನೋ ನಮ್ಮ ಅರಮನೆಯೊಳಗಿನ ವೃದ್ಧ ಸ್ತ್ರೀ ಪರಿಚಾರಿಕೆ ಕಮಲಳ ಹಾಗೆಯೇ ಇದೆ. ಈ ಕುಟಿಲ ಕೂಡಾ ನಿನ್ನೆಯಿಂದ ಕಾಣುವುದಿಲ್ಲ'' ಎಂದಳು ಯುವರಾಣಿ.

"ನಿನ್ನೊಂದಿಗಿರುವ ಆ ಪರಿಚಾರಿಕೆಯರು ಯಾರು?'' ಎಂದು ಕೇಳಿದನು ಮಹೇಂದ್ರನಾಥ.

"ಅನೇಕ ಮಂದಿ ಇದ್ದಾರೆ. ನೋಡಲಿಕ್ಕೆ ಎಲ್ಲರೂ ಒಂದೇ ರೀತಿಯಲ್ಲಿದ್ದಾರೆ. ಒಂದು ಚೂರು ಮಾತು



ಯಜಮಾನನೇ ಈ ಹಾಳು ಕೆಲಸ ಮಾಡಿರ ಬಹುದೇ? ಅವನಲ್ಲದಿದ್ದರೆ ಬೇರೆ ಯಾರು ಮಾಡಿದ್ದಾರು? ಏತಕ್ಕಾಗಿ ಹೀಗೆ ಮಾಡಿದುದು? ಯಾರಿಗಾಗಿ ಮಾಡಿದ ಆ ಕ್ರೂರಾತಿಕ್ರೂರ ರಾಕ್ಷಸನಂಥವನು? ಈಗ ತಾನು ಯುವರಾಣಿಯನ್ನು ಹೇಳಿದ ಮಾತಿನಂತೆ ಮಹಾರಾಜರಿಗೆ ಕಾರಣ ಹೇಳಿ ಒಪ್ಪಿಸುವುದು ಹೇಗೆ? ಎಂದು ಮುಂತಾಗಿ ಆಲೋಚಿಸುತ್ತಾ ಕುಳಿತನು ಮಹೇಂದ್ರನಾಥ.

"ಏನಿದಪ್ಪಾ? ತುಂಬಾ ಬಳಲಿ ಹೋಗಿರುವಿಯಲ್ಲಾ?'' ಎಂಬ ದ್ವಾರಪಾಲಕನ ಕಂಠಸ್ವರ ಕೇಳಿ ಮಹೇಂದ್ರನಾಥನು ಮೆಟ್ಟಿ ಬಿದ್ದನು.

"ಹಾಗೇನಿಲ್ಲ ಮಿತ್ರಾ! ನಿಮ್ಮ ಸಲಹೆಯಂತೆ ಬೇಗನೇ ಬಂದಿಲ್ಲಿ ಕೂತಿದ್ದೇನೆ. ಇದಕ್ಕೆ ಮೊದಲು ಯಾರೋ ಕೆಲವು ಸ್ತ್ರೀಯರು ಉದ್ಯಾನವನದಲ್ಲಿ ತಿರುಗಾಡುವುದನ್ನು ನೋಡಿದೆ. ಏನೂ ವಿಶೇಷವಿಲ್ಲ! ಎಲ್ಲ ಸಪ್ಪಗಾಗಿ ತೂಕಡಿಕೆ ಬರುತ್ತಿದೆ'' ಎಂದನು ಈ ಕೆಲಸದಲ್ಲಿ ಆಸಕ್ತಿ ಇಲ್ಲದವನಂತೆ ಮಹೇಂದ್ರನಾಥ.

"ಸ್ತ್ರೀಯರಾ? ಹೊಸಬರೇನು? ಈ ಮೊದಲು ಅವರನ್ನು ನೋಡಿರುವಿಯಾ?'' ಎಂದು ಕೇಳಿದನು ದ್ವಾರಪಾಲಕ.

"ಇಲ್ಲ. ಮತ್ತೆ ಈ ಬಂದವರು ಹೊಸಬರೇ!'' ಎಂದು ಗೋಣಾಡಿಸಿದನು ಮಹೇಂದ್ರನಾಥ.

"ಹಾಗಾದರೆ ಇನ್ನು ಮೇಲೆ ಅವರನ್ನು ನೋಡುವ ಅವಕಾಶ ನಿನಗೆ ಬರುವುದಿಲ್ಲ. ಏಕೆಂದರೆ ಬಂದ ಪಂಡಿತರೆಲ್ಲರೂ ತಿರುಗಿ ಹೋಗುತ್ತಿದ್ದಾರೆ. ಒಂದು ಪಲ್ಲಕಿ ತರುವಂತೆ ಯಜಮಾನರು ಆಜ್ಞಾಪಿಸಿದ್ದಾರೆ. ಅವರು ಪಲ್ಲಕಿಯಲ್ಲಿ ಹೋಗುವುದನ್ನು ನಾನೆಂದೂ ನೋಡಿರಲಿಲ್ಲ. ಅದೀಗ ಈ ಭವನದಲ್ಲಿರುವ ಯುವರಾಣಿಗಾಗಿಯೇ ಇರಬೇಕು. ಅವಳು ಹೋಗಿ

ಕೂಡಾ ಮಾತಾಡುವುದಿಲ್ಲ. ಏನೋ ಕೆಟ್ಟ ತಂತ್ರದವರ ಹಾಗೆ ಇದ್ದಾರೆ ಎಲ್ಲರೂ. ಆಪತ್ತು ತಲೇ ಮೇಲೆ ಕಾಚಿ ಬೀಳುವುದರೊಳಗೇ ಇಲ್ಲಿಂದ ತಪ್ಪಿಸಿಕೊಳ್ಳಬೇಕು'' ಎಂದು ಹೇಳಿ ಅವಳು ದೂರದಲ್ಲಿರುವ ಪರಿಚಾರಿಕೆಯ ಹತ್ತಿರ ಹೋದಳು.

ಅಷ್ಟರಲ್ಲಿ ಅಲ್ಲಿಗೆ ಮತ್ತೊಬ್ಬ ಪರಿಚಾರಿಕೆ ಕೂಡಾ ಭವನದೊಳಗಿನಿಂದ ಬಂದುದರಿಂದ ಮೂವರೂ ಕೂಡಿ ಮೌನ ವಾಗಿ ಮಾಯಾಭವನದೊಳಗೆ ಹೋದರು.

ಯುವರಾಣಿಯನ್ನು ನೋಡಿದ ಉತ್ಸಾಹದಲ್ಲಿ ಮಹೇಂದ್ರನಾಥನಿಗಾದ ಆನಂದ ವರ್ಣಿಸಲಸದಳ! ಅವನ ಒಳ್ಳೇ ಅದೃಷ್ಟದಿಂದ ಯುವರಾಣಿ ಕ್ಷೇಮವಾಗಿಯೇ ಇದ್ದಾಳೆ. ಅವಳನ್ನು ಇಲ್ಲಿಗೆ ಎತ್ತಿಕೊಂಡು ಬಂದ ಅಧಮನಾದ ಬುದ್ಧಿಶಾಲಿ ಯಾರದು? ತಾನು ದೂರದಿಂದ ನೋಡಿದ ಈ ಮಾಯಾಭವನದ

ಬಿಟ್ಟರೆ ಅವಳೊಂದಿಗಿರುವ ಹೊಸಬರೂ ಹಳೆಯ ಮೂ ಸ್ತ್ರೀಯರೆಲ್ಲರೂ ಹೋಗಿ ಬಿಡುತ್ತಾರೆ. ಆಮೇಲೆ ನಿನಗೆ ನಾನು ಜತೆ, ನನಗೆ ನೀನು ಜತೆ!'' ಎಂದನು ನಗುತ್ತಾ ದ್ವಾರಪಾಲಕ.

ಮಹೇಂದ್ರನಾಥನ ಮನಸ್ಸಿನಲ್ಲಿ ಗೊಂದಲ ವೇಳಲು ತೊಡಗಿತು. ದ್ವಾರಪಾಲಕನು ಹೇಳಿದ ವಿಷಯವನ್ನು ಯುವರಾಣಿಗೆ ತಿಳಿಸುವುದು ಹೇಗಪ್ಪಾ ಎಂದು ಯೋಚಿಸುತ್ತಾ ಕುಳಿತನು. ಅರ್ಧ ರಾತ್ರಿ ಕಳೆಯಿತು. ಭವನದೊಳಗಿನ ಎಲ್ಲಾ ದೀಪಗಳೂ ಆರಿ ಹೋದುವು. ಮಹೇಂದ್ರನಾಥನು ಸಪ್ಪಳವಾಗದಂತೆ ಮೆಲ್ಲಗೆ ಭವನದೊಳಗೆ ಪ್ರವೇಶ ಮಾಡಿದನು. ಪ್ರಧಾನ ದ್ವಾರದ ಬಾಗಿಲುಗಳೆಲ್ಲ ಮುಚ್ಚಿದ್ದುವು. ಸಂಕಲೆ ಹಿಡಿದು ಮೆಲ್ಲಗೆ ಅತ್ತಲೂ ಇತ್ತಲೂ ಎಳೆದನು. ಒಳಗಡೆ ತಾಳ ಹಾಕಿದಂತಿದ್ದಿತು. ಇನ್ನೊಂದು ಬಾಗಿಲಿರಬಹುದೇನೋ ಎಂದುಕೊಂಡು ಅಕ್ಕಪಕ್ಕಗಳಿಗೆ ಹೋಗಿ ಹಾಗೇನೂ ಕಾಣದಿರಲು, ಮತ್ತೆ ಹಿಂದಕ್ಕೆ ಬಂದು ಬಾಗಿಲನ್ನು ಎಡಗೈಯಿಂದ ತಾಗಿದ ಕೂಡಲೇ ಬಾಗಿಲುಗಳೆರಡೂ ಒಮ್ಮೆಗೇ ತೆರೆದುಕೊಂಡವು.

ಅವನು ಇದಿರಿನಲ್ಲಿದ್ದ ಸಣ್ಣಗಿನ ದಾರಿಗೆ ಬಿದ್ದಂತೆ ಕಂಡಿತು. ಆ ದಾರಿಯ ಎರಡು ಬದಿಗಳಲ್ಲಿಯೂ ಬಾಗಿಲು ಮುಚ್ಚಿದ ಕೋಣೆಗಳಿದ್ದುವು. ಎಲ್ಲಿಯೂ ಮನುಷ್ಯರ ಸುಳಿವಿಲ್ಲ. ಮಹೇಂದ್ರನಾಥನು ಆ ಮಾರ್ಗದ ಮೂಲಕ ಹೋಗಿ, ಕೊನೆಯಲ್ಲಿದ್ದ ಮೆಟ್ಟಿಲನಲ್ಲಿ ಮೇಲೇರಿ, ಮೇಲಿನ ಅಂತಸ್ತನ್ನು ಸೇರಿಕೊಂಡನು. ಅಲ್ಲಿ ಕೂಡಾ ಸಣ್ಣಗಿನ ಮಾರ್ಗವೂ, ಬಾಗಿಲು ಮುಚ್ಚಿದ ಕೋಣೆಗಳೂ ಇದ್ದುವು. ಆದರೆ ಅವನು ಎಡಗೈಯಿಂದ ಮುಟ್ಟಿದ ಕೂಡಲೇ ಬಾಗಿಲುಗಳು ತನ್ನಂತಾನೇ ತೆರೆದುಕೊಳ್ಳುತ್ತಿದ್ದುವು. ಹಾಗೆ ಅವನು ಒಂದು ಕೋಣೆಯೊಳಗೆ ಪ್ರವೇ



ಶಿಸಿದನು. ಯಾರೋ ಇದಿರಿನಲ್ಲಿರುವಂತೆ ಕಂಡು ಮೆಟ್ಟಬಿದ್ದನು. ಅದು ತನ್ನದೇ ಪ್ರತಿಬಿಂಬವೆಂದು ಕೂಡಲೇ ತಿಳಿಯಿತು. ಆ ಕೋಣೆಯಲ್ಲಿ ಪೂರಾ ಎಲ್ಲಿ ನೋಡಿದರೂ ನಿಲುವು ಕನ್ನಡಿಗಳನ್ನು ಅಳವಡಿಸಿಕೊಂಡಿದ್ದುವು. ಮಸಕು ಕತ್ತಲೆಯಲ್ಲಿ ಯಾವ ಕಡೆಗೆ ತಿರುಗಿಸಿದರೂ ತನ್ನ ಪ್ರತಿರೂಪಗಳೇ ಕಾಣುತ್ತಿದ್ದುವು. ತನ್ನ ಶರೀರದ ಎಲ್ಲಾ ಭಾಗಗಳನ್ನೂ ನೋಡಬಹುದು. ಅಲ್ಲಿಂದ ಅವನು ಪಕ್ಕದ ಕೋಣೆಗೆ ಹೋದನು.

ಆ ಕೋಣೆ ಕೂಡಾ ಖಾಲಿಯಾಗಿತ್ತು. ಅಲ್ಲಿಂದ ಮೂರನೇ ಕೋಣೆಗೆ ಹೋದನು. ಅಲ್ಲಿ ಕೆಲವು ಮಂದಿ ಸ್ತ್ರೀಯರು ಮಂಚಗಳ ಮೇಲೆ ಮಲಗಿದ್ದರು.

ಅವರಲ್ಲಿ ಯುವರಾಣಿ ಇರುವಳೇ ಎಂದು ಸ್ವಲ್ಪ ಹೊತ್ತು ಪರಿಶೀಲಿಸಿ ನೋಡಿ, ಕಾಣದೆ ಹೋಗಲು ಅಲ್ಲಿಂದ ಪಕ್ಕದ ಕೋಣೆಗೆ ಹೋದನು.



ಅಲ್ಲಿಯೂ ಕೆಲವು ಸ್ತ್ರೀಯರು ಮಲಗಿದ್ದರು. ಐದನೇ ಕೋಣೆಗೆ ಹೋಗಿ ನೋಡಿದರೆ ಅತಿ ಸುಂದರವಾದ ಹಂಸತೂಲಿಕಾ ತಲ್ಪದಲ್ಲಿ ಸುಂದರೀ ಮಣಿಯೊಬ್ಬಳು ಮಲಗಿದ್ದಳು.

ಅವಳು ಯುವರಾಣಿಯಾಗಿದ್ದಾಳೆಂದುಕೊಂಡು, ಅವಳ ತೀರಾ ಸಮೀಪ ಹೋದಾಗ ತನ್ನ ಎಡಗೈ ಬೆರಳಿನಲ್ಲಿದ್ದ ಉಂಗುರವು ಒಂದು ಸಾರಿ ತಳಕ್ಕನೆ ಹೊಳೆಯಿತು.

ಮಾರ್ಗಮಧ್ಯದಲ್ಲಿ ಮುನಿ ಪ್ರಸಾದಿಸಿದ ಈ ಉಂಗುರದ ಮಹಿಮೆಯ ಕಾರಣದಿಂದಲೇ ಬಾಗಿಲುಗಳೆಲ್ಲಾ ತನ್ನಂತಾನೇ ತೆರೆದುಕೊಂಡುವೆಂದು ಅವನ ಗ್ರಹಿಕೆಗೆ ಬಂತು. ಸಂತೋಷದಿಂದ ಅವನು ಯುವರಾಣಿಯ ಮುಖವನ್ನು ಮೆಲ್ಲನೆ ಮುಟ್ಟಿದನು. ಅವಳು ಧಿಡುಕ್ಕನೆದ್ದು ಮಂಚದಿಂದ ಇಳಿದು, "ಮಹೇಂದ್ರನಾಥಾ! ನೀನು ಹೇಗೆ ಬಂದಿ ಇಲ್ಲಿಗೆ?'' ಎಂದು ಕೇಳಿ, ಉತ್ತರಕ್ಕೂ ಕಾಯದೆ ಅವನ ಹಿಂದೆಯೇ ಹೊರಗೆ ಬಂದಳು.

"ಆ ಸಂಗತಿ ಆಮೇಲೆ ಹೇಳುತ್ತೇನೆ. ಈಗ ಪ್ರಯಾಣಕ್ಕೆ ಪಲ್ಲಕಿ ಸಿದ್ಧವಾಗಿರುವುದೊಂದು ಅದೃಷ್ಟ. ಈಗ ನಿನ್ನಲ್ಲಿರುವ ಎಲ್ಲಾ ಪ್ರಶ್ನೆಗಳನ್ನೂ ಹೃದಯದಲ್ಲೇ ಒತ್ತಿಟ್ಟುಕೊಂಡು ನಡೆಯಬೇಕು ಯುವರಾಣೀ''

"ಎಲ್ಲಿಗೆ ಕರೆದೊಯ್ಯುತ್ತಾರೆ?'' ಕೇಳಿದಳು ಯುವರಾಣಿ.

"ಅದೊಂದೂ ನನಗೆ ಗೊತ್ತಿಲ್ಲ. ಇಲ್ಲಿಯ ದ್ವಾರಪಾಲಕ ಉದ್ಯೋಗದಲ್ಲಿರುವ ನಾನು ಅವರು ಹೇಳುವ ಸ್ಥಳಕ್ಕೆ ನಿಮ್ಮನ್ನು ಕರೆದೊಯ್ಯಬೇಕಾದ್ದು ನನ್ನ ಉದ್ಯೋಗ ಧರ್ಮ. ನಾನು ಕರೆದೊಯ್ಯುವಲ್ಲಿಗೆ ನನ್ನೊಂದಿಗೆ ಬರಲು ನಿನಗೆ ಸಮ್ಮತವೇ ಅಲ್ಲವೇ ಎಂದಷ್ಟೇ ಹೇಳಿದರೆ ಸಾಕು! ಮತ್ತೆಲ್ಲಾ ಮತ್ತೆ'' ಎಂದನು ಮಹೇಂದ್ರನಾಥ.

"ನಾನು ಅವರೊಂದಿಗೆ ಹೋಗಲಾರೆ, ಹೋಗಬಾರದು. ಅವರು ನನ್ನನ್ನು ನನ್ನ ತಾಯಿತಂದೆಯರಿರುವಲ್ಲಿಗೆ ಕರೆದೊಯ್ಯುವವರೋ ಅಲ್ಲವೋ ಗೊತ್ತಾಗಲಿಲ್ಲ. ಇದಕ್ಕೆ ನೀನು ಸಹಾಯ ಮಾಡುವಿಯಾ?'' ಎಂದಳು ಯುವರಾಣಿ.

"ನಿನ್ನನ್ನು ನಿನ್ನ ತಂದೆ ತಾಯಿಯರ ಬಳಿಗೆ ಕರೆದೊಯ್ಯಲಿಕ್ಕೇ ನಾನು ಬಂದಿದ್ದೇನೆ ಯುವರಾಣೀ! ಅದಕ್ಕೆ ಮಹಾರಾಜರ ಅನುಮತಿ ಕೂಡಾ ಪಡೆದಿದ್ದೇನೆ. ನಿಮ್ಮ ಬಲಭುಜದ ಮೇಲೆ ಹುಟ್ಟು ಮಚ್ಚೆ ಉಂಟೆಂದು ನಿನ್ನೊಂದಿಗೆ ಹೇಳಲಿಕ್ಕೆ ಮಹಾರಾಜರು ಹೇಳಿದ್ದಾರೆ. ನೀನು ಈಗ ನನ್ನನ್ನು ನಂಬಲೇಬೇಕು! ನಾವಿನ್ನು ತಡ ಮಾಡದೇ ಬೇಗಬೇಗನೇ ಇಲ್ಲಿಂದ ಹೋಗಬೇಕು!'' ಎಂದು ಹೇಳಿ ಕೈ ಮುಗಿದು ತನ್ನೆದೆಯ ಮೇಲಿಟ್ಟುಕೊಂಡನು.

ಯುವರಾಣಿ ಸರಿಯೆಂಬಂತೆ ತಲೆಯಾಡಿಸಿ, "ಇನ್ನು ತಡವೇಕೆ? ಈಗಲೇ ಹೊರಡೋಣ! ಒಳ್ಳೇ ಕಡೆ ನೀನು ಹೇಳುವ ಮಾತನ್ನು ನಂಬದಿದ್ದರೆ ನನಗೆ ಬೇರೆ ಗತಿಯೇ ಇಲ್ಲ. ನಿನ್ನ ಮುಖಲಕ್ಷಣ ಗಳಲ್ಲಿ ಕೆಟ್ಟ ಲಕ್ಷಣ ಯಾವುದೂ ಕಾಣುವುದಿಲ್ಲ. ನಿನ್ನನ್ನು ನಂಬದೆ ಬೇರೆ ಗತಿ ನನಗಿಲ್ಲ. ನೀನು ಕೆಟ್ಟವನಾದರೂ ನನಗೆ ಏನೇನೂ ಭಯವಿಲ್ಲ. ನನಗೂ ಯುದ್ಧವಿದ್ಯೆ ಚೆನ್ನಾಗಿ ಗೊತ್ತಿದೆ! ನಿನ್ನ ಕೈಯಲ್ಲಿ ಸತ್ತರೂ ಸತ್ತೇನೇ ಹೊರತು, ಜೀವದಿಂದ ನನ್ನನ್ನು ಏನು ಮಾಡಲಿಕ್ಕೂ ಸಾಧ್ಯವಿಲ್ಲ. ಆದ್ದರಿಂದ ಹೊರಡುವುದೇ ಸರಿ'' ಎಂದಳು.

"ಹೌದು, ನಿನ್ನ ಶೌರ್ಯ ವಿಷಯ ಕೇಳಿ ಸಂತೋಷವಾಯಿತು. ಹೋಗೋಣ, ಧೈರ್ಯ ದಿಂದ ಮುಂದಡಿ ಇಡು. ಈಗಲೇ ನನ್ನ ಹತ್ತಿರ ಬಾಗಿಲ ಬೀಗದ ಕೈ ಇದೆ, ಈ ಅಪರಾತ್ರಿಯಲ್ಲಿ ಹೊರಡಲಿಕ್ಕೆ ನಿನಗೆ ಭಯವಿಲ್ಲವಷ್ಟೇ? ನಿನ್ನ ಮನೆಯ ಗುರುತು ತಿಳಿದರೆ ನಿನ್ನ ಭಯವೆಲ್ಲಾ ಹಾರಿ ಹೋಗುತ್ತದೆ'' ಎಂದನು ಮಹೇಂದ್ರನಾಥ.

"ಇಲ್ಲಾ, ಇಲ್ಲಾ! ಇಲ್ಲಿದ್ದು ಬೆಳಗಾದ ಕೂಡಲೇ ಏನು ನಡೆಯುತ್ತದೋ ಎಂದು ಹೆದರಿಕೊಂಡಿರು ವುದಕ್ಕಿಂತ ಇಲ್ಲಿಂದ ಹೊರಟು ಹೋಗುವುದೇ ಮೇಲು. ನೀನು ಜತೆಗಿರುವಿಯಲ್ಲಾ! ಮತ್ತಿನ್ನೇಕೆ ಭಯ? ಕಾಲಹರಣ ಮಾಡದೆ ಹೋಗಿ ಬಿಡುವಾ!'' ಎಂದಳು ಯುವರಾಣಿ.

"ಹಾಗೆಯೇ ಯುವರಾಣೀ! ಭವನದೊಳಗಿನಿಂದ ಹೊರಗೆ ಬರುವವರೆಗೆ ನೀನು ನನ್ನ ಹಿಂದೆ ಸ್ವಲ್ಪ ದೂರದಲ್ಲಿ ನಿಃಶಬ್ದವಾಗಿ ನಡೆದು ಬರಬೇಕು'' ಎಂದು ಎಚ್ಚರಿಸಿ ಮಹೇಂದ್ರನಾಥನು ಭವನದ ಹೊರಗೆ ನಡೆದನು.

ಇಬ್ಬರೂ ಹೊರಗಿನ ದ್ವಾರವನ್ನು ಸಮೀಪಿಸಿದರು. ನಾಲ್ಕು ಸುತ್ತಲೂ ಯಾವ ಶಬ್ದವೂ ಇಲ್ಲ. ಮಹೇಂದ್ರನಾಥನೂ ಒಂದಿಷ್ಟು ಕೂಡಾ ಶಬ್ದವಾಗ ದಂತೆ ಬಾಗಿಲು ತೆರೆದು ಮೊದಲು ಯುವರಾಣಿ ಯನ್ನು ಹೊರಗೆ ಕಳುಹಿಸಿ, ತಾನು ಒಳಗಡೆಯಿಂದ ಬಾಗಿಲಿಗೆ ತಾಳ ಹಾಕಿದನು. ಹೊರಗಿನಿಂದಲೇ ಒಳಗಿನ ತಾಳ ಬೀಳುವಂತೆ ಸೂತ್ರವಿರುವ ಬಾಗಿಲಾ ಗಿತ್ತು ಅದು!

"ಈ ಮಾಯಾಭವನದಿಂದ ಹೊರಬಿದ್ದೆವು. ವೀರಗಿರಿಗೆ ದಾರಿ ಗೊತ್ತಿದೆಯೇ?'' ಎಂದು ಕೇಳಿದಳು ಯುವರಾಣಿ ವಿದ್ಯಾವತಿ.

"ಚೆನ್ನಾಗಿ ಗೊತ್ತಿದೆ'' ಎಂದನು ಮಹೇಂದ್ರನಾಥ.

—(ಇನ್ನೂ ಇದೆ)



# ಮಾಯಾಭವನ

೧೧

[ಯುವರಾಣಿಯ ಪ್ರಯಾಣಕ್ಕೆ ಪಲ್ಲಕಿ ಸಿದ್ಧವಾಗಿರುವುದೆಂದು ದ್ವಾರಪಾಲಕನ ಮೂಲಕ ತಿಳಿದುಕೊಂಡ ಮಹೇಂದ್ರನಾಥನು ಆ ರಾತ್ರಿಯಲ್ಲೇ ಮಾಯಾಭವನದೊಳಗೆ ಪ್ರವೇಶಿಸಿ, ಯುವರಾಣಿ ವಿದ್ಯಾವತಿಗೆ ಆ ಸಂಗತಿ ಹೇಳಿದನು. ಯುವರಾಣಿ ಆ ಕೂಡಲೇ ಮಾಯಾಭವನದಿಂದ ಹೊರಗೆ ಹೊರಟು ಬರಲು ಸಮ್ಮತಿಸಿದಳು. ಇಬ್ಬರೂ ಅತ್ಯಂತ ಜಾಗರೂಕತೆಯಿಂದ ಮಾಯಾಭವನದಿಂದ ಹೊರಟರು. ಅನಂತರ]

ವೃದ್ಧ ಸ್ತ್ರೀ ಬೆಳಂಜಾಮದಲ್ಲೇ ಎದ್ದು ತನ್ನ ಯಜಮಾನನ ಆಜ್ಞೆಯ ಪ್ರಕಾರ ಯುವರಾಣಿ ವಿದ್ಯಾವತಿಯನ್ನು ಪ್ರಯಾಣಕ್ಕೆ ಸಿದ್ಧಪಡಿಸಲು ಅವಳ ಕೋಣೆಯೊಳಗೆ ಹೋದಳು.

ಆದರೆ ಅಲ್ಲಿ ಯುವರಾಣಿ ಕಾಣಿಸಲಿಲ್ಲ. ಅವಳು ಸ್ವಲ್ಪ ಗಾಬರಿ ಯಾಗಿ ಪಕ್ಕದ ಕೋಣೆಗೆ ಹೋಗಿ ನೋಡಿದಳು. ಆ ಕೋಣೆಯ ಬಾಗಿಲುಗಳೆಲ್ಲಾ ತೆರೆದಿದ್ದುವೇ ಹೊರತು ಅಲ್ಲಿ ಕೂಡಾ ಯುವರಾಣಿ ಇಲ್ಲ. ಅವಳು ಅತ್ಯಾಶ್ಚರ್ಯದಿಂದ ಕೋಣೆಗಳನ್ನೆಲ್ಲಾ ಒಂದೂ ಬಿಡದೆ ಹುಡುಕಿದಳು.

ಕಿಟಕಿಗಳ ಹತ್ತಿರ ನೋಡಿದಳು. ಎಲ್ಲಿಯೂ ಯುವರಾಣಿಯ ಜಾಡು ಇರಲಿಲ್ಲ. ಪರಿಚಾರಿಕೆ ಮಾಲಿನಿಯ ಕೋಣೆಯೊಳಗೆ ಹೋದಳು. ಆ ಕೋಣೆಯ ಬಾಗಿಲುಗಳು ಕೂಡಾ ತೆರೆದೇ ಇದ್ದುವು. ಹಾಗೆಯೇ ಹೊರಗಿನ ದ್ವಾರದ ಹತ್ತಿರ ಹೋಗಿ ನೋಡಿದಳು.

ಆ ಬಾಗಿಲಿಗೆ ದೊಡ್ಡ ಬೀಗ ನೇತಾಡಿಕೊಂಡಿತ್ತು. ದ್ವಾರಪಾಲಕನು ಕಾಣಲಿಲ್ಲ. ಅವಳು ಹಿಂದಕ್ಕೆ




ತಿರುಗಿ ಭವನದೊಳಗೆ ಗಬಗಬನೆ ನಡೆದಳು. ಸ್ವಲ್ಪ ಹೊತ್ತಿನಲ್ಲಿ ಪಲ್ಲಕಿ ಬರುತ್ತದೆಂದು ಅದರಲ್ಲಿ ಯುವರಾಣಿಯನ್ನು ಕೂಡಿಸಿ ಜತೆಯಾಗಿ ಬರಬೇಕೆಂದು ಯಜಮಾನ ನಿನ್ನೆ ಆಜ್ಞಾಪಿಸಿದ್ದಾನೆ. ಆದರೆ ಈಗ ಯುವರಾಣಿ ಕಾಣಿಸುವುದಿಲ್ಲವಷ್ಟೇ? ಅವಳು ಧೈರ್ಯ ತಂದುಕೊಂಡು ಈಗೇನು ಮಾಡಬೇಕೆಂದು ಆಲೋಚನೆ ಮಾಡಿ ಕ್ಷಣ ಮಾತ್ರದಲ್ಲಿ ಒಂದು ಉಪಾಯ ಕಂಡು ಹಿಡಿದಳು. ಅವಳು ಪರಿಚಾರಿಕೆ ಮಾಲಿನಿಯ ಕೋಣೆಗೆ ಹೋಗಿ, ಗಾಢ ನಿದ್ದೆಯಲ್ಲಿ ಮೈಮರೆತಿದ್ದವಳನ್ನು ತಟ್ಟಿ ಎಬ್ಬಿಸಿ, "ಈಗಲೇ ಅಲಂಕಾರ ಮಾಡಿಕೊಂಡು ಪ್ರಯಾಣಕ್ಕೆ ತಯಾರಾಗು'' ಎಂದು ಆಜ್ಞೆ ಮಾಡಿದಳು.

ಸ್ವಲ್ಪ ಹೊತ್ತಿನಲ್ಲಿ ಅವಳು ಯುವರಾಣಿಯಂತೆಯೇ ಸರ್ವಾಲಂಕಾರಭೂಷಿತೆಯಾಗಿ ಬಂದ ಮಾಲಿನಿಯನ್ನು ಕರೆದುಕೊಂಡು ಮೆಟ್ಟಿಲಿನ ಮೂಲಕ ಕೆಳಗಿಳಿದಳು. ಅಲ್ಲೊಂದು ಪಲ್ಲಕಿ ತಯಾರಾಗಿದ್ದಿತು. ಮಾಲಿನಿ ಅದು ತನಗಾಗಿಯೇ ತಯಾರಾದ ಪಲ್ಲಕಿ ಎಂಬುದನ್ನು ನಂಬಲಾಗದೆ ಆಶ್ಚರ್ಯದಿಂದ, "ಇದರಲ್ಲಿಯಾ? ಹೀಗೆ ಪಲ್ಲಕಿಯಲ್ಲಿ ಕುಳಿತುಕೊಂಡು ನಾನು ಎಲ್ಲಿಗೆ ಹೋಗಬೇಕು?'' ಎಂದು ಕೇಳಿದಳು.

"ಹೌದು. ಅದು ನಿನಗಾಗಿಯೇ ತಯಾರಾಗಿದೆ. ಎಲ್ಲಿಗೆ ಹೋಗುವುದೆಂಬ ವಿಷಯ ನಿನಗೆ ಅಗತ್ಯವಿಲ್ಲ. ಪಲ್ಲಕಿಯ ಜತೆಯಲ್ಲೇ ನಾನೂ ಬರುತ್ತೇನಲ್ಲ? ನಿನಗೆ ಎಂತಹ ಭಯವೂ ಇಲ್ಲ. ನಾನು ಹೇಳಿದ ಹಾಗೆ ಮಾಡು. ಇದು ಯಜಮಾನರ ಆಜ್ಞೆ'' ಎಂದು ಎಚ್ಚರಿಸಿದಳು ಕೃತ್ರಿಮ ವೃದ್ಧ ಸ್ತ್ರೀ.

ಮಾಲತಿ ಹಾಗೆಯೇ ಪಲ್ಲಕಿಯಲ್ಲಿ ಕುಳಿತು ತೆರೆಯನ್ನು ಇಳಿಸಿಕೊಂಡಳು. ಬೋಯಿಗಳು ಪಲ್ಲಕಿಯನ್ನು ಎತ್ತಿಕೊಂಡರು. ವೃದ್ಧ ಸ್ತ್ರೀ ಭವನದ ದ್ವಾರದ ಬಾಗಿಲುಗಳನ್ನು ಎಳೆದು ಮುಚ್ಚಿ, ಕೂಡಾ ಪಲ್ಲಕಿಯ ಜತೆಯಲ್ಲೇ ಬೋಯಿಗಳ ನಡಿಗೆಗನುಸಾರವಾಗಿ ನಡೆದಳು.

ಮಾಯಾಭವನದೊಳಗಿಂದ ಹೊರಬಿದ್ದು ಅದಕ್ಕೆ ಮೊದಲೇ ಅರಣ್ಯದೊಳಗೆ ಸೇರಿದ್ದ ಮಹೇಂದ್ರನಾಥನಿಗೂ, ಯುವರಾಣಿ ವಿದ್ಯಾವತಿಗೂ ಒಂದು ದಾರಿ ಕಾಣಿಸಿತು. ಅವರು ಬೇರೆ ಯಾರ ಕಣ್ಣಿಗೂ ತಾವು ಕಾಣಬಾರದೆಂದು ಬೇರೆ ದಾರಿ ಹಿಡಿದು ಸ್ವಲ್ಪ ದೂರ ಸಾಗಿ ಆಗಾಗ ಹಿಂದಿರುಗಿ ನೋಡುತ್ತಾ, ಏನಾದರೂ ಶಬ್ದ ಕೇಳಿದಾಗ ಪಕ್ಕಕ್ಕೆ ತಪ್ಪಿಸಿಕೊಳ್ಳುತ್ತಾ, ಸುತ್ತು ಮುತ್ತಲೂ ಪರಿಶೀಲಿಸುತ್ತಾ ಮುಂದೆ ಮುಂದೆ ನಡೆಯುತ್ತಿದ್ದರು.

ಸ್ವಲ್ಪ ಹೊತ್ತಿನಲ್ಲಿ ಅವರಿಗೆ ದೂರದಲ್ಲಿ ಬೋಯಿಗಳ ಹಾಡು ಕೇಳಿಸಿತು. ಥಕ್ಕನೆ ಅವರು ಒಂದು ಪೊದರಿನ ಮರೆಯಲ್ಲಿ ಅಡಗಿಕೊಂಡರು.

ಸ್ವಲ್ಪ ಹೊತ್ತಿಗೆ ಬೋಯಿಗಳು ಪಲ್ಲಕಿ ಹೊತ್ತು

ಕೊಂಡು ಅವರನ್ನು ದಾಟಿಕೊಂಡು ಹೋದರು. ಪಲ್ಲಕಿಯ ಜತೆಯಲ್ಲಿ ವೃದ್ಧಸ್ತ್ರೀಯೂ ಹೋಗುತ್ತಿದ್ದಳು. ಪಲ್ಲಕಿಯೊಳಗೆ ಹೋಗುವುದು ಯಾರೆಂದು ಗೊತ್ತಾಗಲಿಲ್ಲ. ಪಲ್ಲಕಿ ಬಂದದ್ದೇನೋ ತನಗಾಗಿ. ಈಗ ಅದರಲ್ಲಿ ಹೋಗುವುದು ಯಾರಾಗಿರಬಹುದು? ಎಂದು ಯುವರಾಣಿ ವಿದ್ಯಾವತಿಗೆ ಆಲೋಚನೆ ಎದ್ದಿತು.



"ಯುವರಾಣೀ ನಾವು ಅತ್ಯಂತ ಜಾಗರೂಕತೆಯಲ್ಲಿರಬೇಕು. ನಮ್ಮಿಬ್ಬರ ವೇಷಗಳನ್ನು ಕೂಡಾ ಬದಲಾಯಿಸಿಕೊಳ್ಳುವುದು ಒಳ್ಳೆಯದು'' ಎಂದನು ಮಹೇಂದ್ರನಾಥ.

"ನಿಜವೇ. ಬೆಳಗಾದ ಕೂಡಲೇ ಬದಲಾಯಿಸಿಕೊಳ್ಳೋಣ'' ಎಂದಳು ವಿದ್ಯಾವತಿ.

ಬೆಳಗಾಗುವ ಸಮಯದಲ್ಲಿ ಬೋಯಿಗಳು ಹೊತ್ತುಕೊಂಡು ಹೋದ ಪಲ್ಲಕಿ ಸಮತಲವಾದ ಒಂದು ಪ್ರದೇಶವನ್ನು ತಲುಪಿತು.

ಅಲ್ಲಿ ಮತ್ತಿಬ್ಬರು ಬೋಯಿಗಳು ಇನ್ನೊಂದು ಪಲ್ಲಕಿಯೊಂದಿಗೆ ಸಿದ್ಧರಾಗಿದ್ದರು. ಅವರಿಗೆ ಸಮೀಪವಾಗಿ ಮೂವರು ಕುದುರೇ ಮೇಲೆ ಕುಳಿತಿದ್ದರು. ಅವರಲ್ಲಿ ಒಬ್ಬನು ವೃದ್ಧಸ್ತ್ರೀಯನ್ನು ಸಮೀಪಿಸಿ, "ಯುವರಾಣಿಯನ್ನು ಆ ಪಲ್ಲಕಿಯಿಂದ ಈ ಪಲ್ಲಕಿಗೆ ಸೇರಿಸು'' ಎಂದು ಆಜ್ಞೆ ಮಾಡಿದನು.

ಆ ಮಾತಿನಿಂದ ಆಶ್ಚರ್ಯಪಟ್ಟ ವೃದ್ಧಸ್ತ್ರೀ "ಯಜಮಾನರು ಎಲ್ಲಿದ್ದಾರೆ? ನನಗೆ ಅವರ ಹತ್ತಿರ ಮಾತಾಡಬೇಕಾಗಿದೆ'' ಎಂದಳು.

"ಯಜಮಾನ್ರು ನಮಗಾಗಿ ಮತ್ತೊಂದು ಕಡೆಯಲ್ಲಿ ಕಾದುಕೊಂಡಿದ್ದಾರೆ. ಯುವರಾಣಿಯನ್ನು ಕ್ಷೇಮವಾಗಿ ಅವರ ಹತ್ತಿರ ಸೇರಿಸಬೇಕಾದ ಬಾಧ್ಯತೆ ನಮ್ಮದು. ನಿನಗೆ ಆ ವಿಚಾರಣೆಯ ಅಗತ್ಯವಿಲ್ಲ. ನೀನು ಆ ಪಲ್ಲಕಿಯಲ್ಲಿ ಕುಳಿತು ಹಾಯಾಗಿ ಮಾಯಾಭವನಕ್ಕೆ ಹೋಗಿ ಸೇರಬಹುದು. ಕಷ್ಟಪಡುತ್ತ ನಡೆಯಬೇಕಾದ ಅಗತ್ಯವೂ ನಿನಗಿಲ್ಲ'' ಎಂದನು ಆ ಕುದುರೇಸವಾರ.

ಅವನ ಕಂಠಸ್ವರವು ತನ್ನ ಯಜಮಾನರ ಕಂಠಸ್ವರದ ಹಾಗೆಯೇ ಇದ್ದುದರಿಂದ ವೃದ್ಧಸ್ತ್ರೀ ಮೆಟ್ಟಿ ಬಿದ್ದಳು.

ಅವನ ಮುಖವನ್ನು ದಿಟ್ಟಿಸಿ ನೋಡುತ್ತಿರಲು ಅವಳ ಎದೆ ದಡದಡಿಸತೊಡಗಿತು. ಮುಖದಲ್ಲಿ ರಾಜಠೀವಿ ಎದ್ದು ಕಾಣುತ್ತಿತ್ತು. ನೋಡಿದರೆ ಯಾವನೋ ರಾಜಕುಮಾರನ ಹಾಗಿದ್ದನು. ಇನ್ನೇನೂ ಮಾಡಲು ಸಾಧ್ಯವಿಲ್ಲದೆ ವೃದ್ಧಸ್ತ್ರೀ ಮಾಲಿನಿಯನ್ನು ಹೊಸ ಪಲ್ಲಕಿಗೆ ಕಳುಹಿಸಿ ಏರಿಸುತ್ತ, "ಇವರು ನಿನ್ನನ್ನು ಸುರಕ್ಷಿತವಾಗಿ ಯಜಮಾನರ ಹತ್ತಿರ ಸೇರಿಸುತ್ತಾರೆ'' ಎಂದು ಹೇಳಿ ಪಲ್ಲಕಿಯ ತೆರೆಯನ್ನು ಸರಿಯಾಗಿ ಮುಚ್ಚಿದಳು.



ಸಮತಲ ಪ್ರದೇಶವನ್ನು ಸೇರಿಕೊಂಡು ನೆಮ್ಮದಿಯಿಂದ ನಿಟ್ಟುಸಿರು ಬಿಟ್ಟರು. ದೂರದಲ್ಲಿ ಒಂದು ಕುಟೀರವು ಕಾಣುತ್ತಿತ್ತು. ಅದು ತನ್ನನ್ನು ಆಶೀರ್ವಾದ ಪೂರ್ವಕವಾಗಿ ಕಳುಹಿಸಿದ ಮುನಿಯ ಆಶ್ರಮವೆಂದು ಗೊತ್ತಾಗಿ ಮಹೇಂದ್ರನಾಥನು ಪರಮಾನಂದ ಗೊಂಡು ತನ್ನ ಬೆರಳಿನಲ್ಲಿದ್ದ ಉಂಗುರವನ್ನು ಕೃತಜ್ಞತೆಯಿಂದ ಒಂದು ಸಾರಿ ನೋಡಿಕೊಂಡನು. ಮುನಿ ತನಗೆ ಮಹಿಮೆಯ ಉಂಗುರವನ್ನು ಕೊಟ್ಟು ಕಳುಹಿಸಿದ ಸಂಗತಿಯನ್ನು ಯುವರಾಣಿಯೊಂದಿಗೆ ಈಗ ತಿಳಿಸಿದನು. ಅದನ್ನು ಕೇಳಿ ಅವಳಿಗೂ ಸಂತೋಷವಾಯಿತು.

ಅವನಿಗೆ ಕೊಟ್ಟ ಮಾತಿನ ಪ್ರಕಾರ ಹಿಂದಿರುಗುವ ಸಮಯದಲ್ಲಿ ಅವನನ್ನು ದರ್ಶನ ಮಾಡಲು ಹೋಗಬೇಕೆಂದುಕೊಳ್ಳುತ್ತಾ ಆ ಕುಟೀರದ ಕಡೆಗೆ ನಡೆಯ ತೊಡಗಿದನು.

ಮರುಕ್ಷಣವೇ ಕುದುರೆಗಳ ಮೇಲಿದ್ದ ಮೂವರು ವ್ಯಕ್ತಿಗಳ ಹಿಂದೆ ಪಲ್ಲಕಿ, ಬೋಯಿಗಳ ಮಂದವಾದ ಹಾಡಿನೊಂದಿಗೆ ಕದಲಿತು.

ವೃದ್ಧಸ್ತ್ರೀ ಇದಕ್ಕೆ ಮೊದಲೇ ಮಾಲಿನಿ ಬಂದ ಪಲ್ಲಕಿಯಲ್ಲಿ ಏರಿ ಕುಳಿತು ಸೊಗಸಾಗಿ ಮಾಯಾ ಭವನಕ್ಕೆ ಹೊರಟಳು.

ಸೂರ್ಯೋದಯವಾದ ಕೂಡಲೇ ದಾರಿ ಸ್ಪಷ್ಟವಾಗಿ ಕಾಣಿಸಿದ್ದರಿಂದ, ಮಹೇಂದ್ರನಾಥನು ಯುವರಾಣಿಯೂ ಅತ್ಯುತ್ಸಾಹದಿಂದ ವೇಗವಾಗಿ ಗುಡ್ಡವನ್ನಿಳಿಯತೊಡಗಿದರು.

ಹೀಗೆ ಅವರು ನಡೆದು ನಡೆದು ನಡು ಮಧ್ಯಾಹ್ನದ ಸಮಯಕ್ಕೆ ಗುಡ್ಡದ ಬುಡವನ್ನು ಸೇರಿ ಸ್ವಲ್ಪ ಹೊತ್ತು ವಿಶ್ರಾಂತಿಗೆ ಕುಳಿತು, ಮತ್ತೆ ಪ್ರಯಾಣ ಸಾಗಿಸಿದರು. ಪಶ್ಚಿಮ ದಿಶೆಯಲ್ಲಿ ಹೊತ್ತು ಇಳಿದು ಕಂತಲಿಕ್ಕಾದಾಗ ಅವರು ಒಂದು

ನಡೆಯುವ ಶಬ್ದ ಕೇಳಿ, ಒಳಗಿದ್ದ ಮುನಿ ಬಾಗಿಲು ತೆರೆದು ಬಂದು ಕಿರುನಗುವಿನೊಂದಿಗೆ, "ಬಾ, ಬಾರಪ್ಪಾ! ನೀನು ಈ ಕಾರ್ಯ ಸಾಧಿಸ ಬಲ್ಲವನೇ ಎಂದು ನನಗೆ ಗೊತ್ತಿತ್ತು. ವೀರಗಿರಿ ಯುವರಾಣಿಗೂ ಶುಭ ಸ್ವಾಗತ!'' ಎಂದನು.

"ನಮ್ಮ ಬರುವಿಕೆಯನ್ನೇ ನೀವು ಇದಿರು ನೋಡುವ ಹಾಗೆ ಕಾಣುತ್ತಿತ್ತು. ಇಷ್ಟು ದೂರದಲ್ಲಿ ನಾವೇ ಬರುವುದೆಂದು ನಿಮಗೆ ಹೇಗೆ ಗೊತ್ತಾಯಿತು?'' ಎಂದು ಕೇಳಿದನು ಮಹೇಂದ್ರನಾಥ ಅತ್ಯಾಶ್ಚರ್ಯದಿಂದ.

ಮುನಿ ತನ್ನ ಬೆರಳಲ್ಲಿರುವ ಉಂಗುರವನ್ನು ನೋಡಿ, "ಈ ಉಂಗುರಕ್ಕೂ ಆ ದಿನ ನಾನು ನಿನಗೆ ಕೊಟ್ಟ ಉಂಗುರಕ್ಕೂ ಮಹಿಮೆಗಳಿವೆ. ಈ ಉಂಗುರವನ್ನು ನಾನು ಧರಿಸಿದ ಕೂಡಲೇ ಅದು ನಿನಗೆ ತಿಳಿಯದಂತೆಯೇ ನಿನ್ನನ್ನೂ, ಯುವರಾಣಿಯನ್ನೂ



ಇಲ್ಲಿಗೆ ನನ್ನ ಬಳಿಗೆ ದಾರಿ ತಪ್ಪದಂತೆ ಮಾಡಿ ಕರೆದುಕೊಂಡು ಬಂದಿತು'' ಎಂದನು.

"ಹಾಗೇನು!'' ಎಂದು ಮುನಿಗೆ ನಮಸ್ಕಾರ ಮಾಡಿದನು ಮಹೇಂದ್ರನಾಥ.

"ನೀವಿಬ್ಬರೂ ಇಲ್ಲಿಗೆ ಬಂದುದು ನನಗೆಷ್ಟೋ ಆನಂದವಾಗಿದೆ. ನೀವಿಬ್ಬರೂ ಈ ರಾತ್ರಿಯಲ್ಲಿ ಇಲ್ಲಿಯೇ ಇದ್ದು ಬೆಳಗಾದ ಕೂಡಲೇ ಹೊರಡಿರಿ'' ಎಂದನು.

ಆ ರಾತ್ರಿ ನಿದ್ರಿಸುವುದಕ್ಕೆ ಮೊದಲು, ಅವರಿಬ್ಬರೂ, ಆ ಮುನಿಯನ್ನು ಬಿಟ್ಟು ಮಹೇಂದ್ರನಾಥನು ಹೊರಟು ಹೋದ ಮೇಲೆ ನಡೆದ ಸಮಾಚಾರಗಳನ್ನೆಲ್ಲಾ ಮುನಿಯೊಂದಿಗೆ ಹೇಳಿದರು. ಯುವರಾಣಿಯೂ ತನ್ನ ಅನುಭವವನ್ನು ಸೇರಿಸಿದಳು. ಮುನಿ ಅವುಗಳನ್ನು ಮುಗುಳ್ನಗುತ್ತಾ ಕೇಳಿದನು.

ಬೆಳಗಾದ ಮೇಲೆ ಮುನಿ ಮಹೇಂದ್ರನಾಥನನ್ನೂ, ಯುವರಾಣಿಯನ್ನೂ ಹತ್ತಿರ ಕರೆದು, "ನಿಮ್ಮೊಂದಿಗೆ ನಾನೂ ರಾಜಧಾನೀ ನಗರಕ್ಕೆ ಬರುತ್ತೇನೆ. ಅದು ನಿಮಗೆ ಸ್ವಲ್ಪ ರಕ್ಷಣೆಯಾಗಿಯೂ ಇರುತ್ತದೆ. ಇಷ್ಟು ಕಾಲದ ಮೇಲೆ ನನ್ನ ಕರ್ತವ್ಯವನ್ನು ನೆರವೇರಿಸಲಿಕ್ಕೆ ಬಂದಿರುವ ಈ ಸದವಕಾಶವನ್ನು ಈಗ ಸದ್ವಿನಿಯೋಗ ಮಾಡಿಕೊಳ್ಳುತ್ತೇನೆ'' ಎಂದು ಹೇಳಿದನು.

"ಅದೇನು?'' ಎಂದನು ಮಹೇಂದ್ರನಾಥ.

"ನಿಮಗೆ ಆ ವಿವರ ತಿಳಿಯಬೇಕಾದರೆ ಶೋಕ ತುಂಬಿದ ನನ್ನ ಕಥೆಯನ್ನು ಕೂಡಾ ತಿಳಿಸಬೇಕಾಗಿದೆ'' ಎಂದನು ಮುನಿ.

ಮಹೇಂದ್ರನಾಥನೂ ಯುವರಾಣಿಯೂ ಕುತೂಹಲದಿಂದ "ಹೇಳಿರಿ'' ಎಂದರು.

"ಅದೊಂದು ದೊಡ್ಡ ವಿಷಾದ ಕಥೆ. ಅದನ್ನೀಗ ಸಂಕ್ಷಿಪ್ತವಾಗಿ ಹೇಳುತ್ತೇನೆ'' ಎಂದು ಮುನಿ ಆ ಕಥೆ ಹೇಳಿದನು.

"ಮಹಿಮಾಪುರೀ ರಾಜ್ಯದ ವಿಷಯ ನೀವು ಕೇಳಿದ್ದೀರಷ್ಟೆ? ಯುವರಾಜ ವೀರೇಂದ್ರನಾಥನು ಯುವಕನಾಗಿದ್ದಾಗ, ಅವನ ತಂದೆ ಬೇಟೆಯಾಡಲು ಹೋಗಿ ಪ್ರಮಾದವಶಾತ್ತಾಗಿ ಪ್ರಾಣ ಕಳೆದುಕೊಂಡನು. ಇಪ್ಪತ್ತೊಂದನೇ ವರ್ಷ ಪ್ರಾಯದಲ್ಲಿ ವೀರೇಂದ್ರನಾಥನಿಗೆ ರಾಜ್ಯಾಭಿಷೇಕವಾಯಿತು. ಸೋದರಿಯಾದ ಐಶ್ವರ್ಯಳನ್ನು ಅವನ ರಕ್ಷಣೆಗೆ ಒಪ್ಪಿಸಿ, ಅವನ ತಾಯಿ ಕೂಡಾ ಕಣ್ಣು ಮುಚ್ಚಿದಳು. ಧರ್ಮನಿರತನೂ, ಭಕ್ತಿತತ್ಪರನೂ ಆದ ವೀರೇಂದ್ರನಾಥನು ಪ್ರಜಾರಂಜಕನಾಗಿ ಪರಿಪಾಲನೆ ಸಾಗಿಸಿಕೊಂಡಿದ್ದನು. ಸಹೋದರಿ ಐಶ್ವರ್ಯಳನ್ನು ಹೊರಗಿನ ರಾಜ್ಯದ ಯುವರಾಜನಾದ ಸುರೇಂದ್ರನಿಗೆ ಕೊಟ್ಟು ಮದುವೆ ಮಾಡಿದನು. ಅವರಿಗೆ ಒಬ್ಬ ಗಂಡು ಮಗು ಹುಟ್ಟಿದ. ವೀರೇಂದ್ರನಾಥನು ಯಾವಾಗಲೂ

ತೀರ್ಥಯಾತ್ರೆ ಹೋಗುವುದು ವಾಡಿಕೆಯಾಗಿತ್ತು. ಸುರೇಂದ್ರನಾಥನೂ ಅವನ ತಮ್ಮ ಜಿತೇಂದ್ರನಾಥನೂ ರಾಜ್ಯದಲ್ಲಿರುತ್ತಿದ್ದರು. ಒಂದು ಸಾರಿ ವೀರೇಂದ್ರ ನಾಥನು ತೀರ್ಥಯಾತ್ರೆಗೆ ಹೋಗುವ ಸಂಗತಿ ಗೊತ್ತಾಗಿ, ಇದೇ ಸುಯಾದ ಸಮಯವೆಂದು ಕೊಂಡು ಪಾಟಲೀಪುರದ ರಾಜ ಮಹಿಮಾಪುರದ ಮೇಲೆ ದಂಡೆತ್ತಿ ಬಂದನು. ಯುದ್ಧದಲ್ಲಿ ಸುರೇಂದ್ರ ನಾಥನು ಸತ್ತನು. ಸುರೇಂದ್ರನಾಥನ ಹೆಂಡತಿ ಐಶ್ವರ್ಯಳನ್ನೂ, ತಮ್ಮನಾದ ಜಿತೇಂದ್ರನಾಥನನ್ನೂ ಶತ್ರುಗಳು ರಾಜ್ಯದಿಂದ ಓಡಿಸಿಬಿಟ್ಟರು. ತೀರ್ಥ ಯಾತ್ರೆಯಿಂದ ತಿರುಗಿ ಬಂದ ವೀರೇಂದ್ರನಾಥನನ್ನು ಹಿಡಿದು ಬಂಧಿಸಿದರು. ತನ್ನ ಸಹೋದರಿ ದೂರ ವಾಗಿ ಹೋದುದರಿಂದ ರಾಜನು ಕಾರಾಗೃಹದಲ್ಲೇ ಚಿಂತೆಯಿಂದ ನುಳಿ ನುಳಿ ಕಡೆಗೊಂದು ದಿನ ಸಾವನ್ನಪ್ಪಿದನು.

ಜಿತೇಂದ್ರನಾಥನು ಅಣ್ಣನ ಮಗನನ್ನೂ, ಐಶ್ವರ್ಯಳನ್ನೂ ಕರೆದುಕೊಂಡು ಎಲ್ಲೆಲ್ಲೋ ತಿರುಗಿ ಕೊನೆಗೆ ವೀರಗಿರಿ ರಾಜ್ಯವನ್ನು ಸೇರಿಕೊಂಡನು. ಅಲ್ಲಿ ಸ್ವಲ್ಪಕಾಲ ಚಡಪಡಿಕೆಯಲ್ಲೇ ಕಳೆಯಿತು. ಜಿತೇಂದ್ರನಾಥನು ಒಬ್ಬಳು ಯುವತಿಯನ್ನು ಮದುವೆಯಾದನು. ಆದರೆ ಅವಳು ಕೂಡಾ ಸತ್ತಳು. ಜೀವಿತದ ಮೇಲೆ ವಿರಕ್ತಿ ಹುಟ್ಟಿ, ಜಿತೇಂದ್ರನಾಥನು ಮನೆಬಿಟ್ಟು, ದೇಶಾಟನೆಗೆ ಹೊರಟು, ಕಡೆಗೆ ಒಂದು ಅರಣ್ಯದಲ್ಲಿ ಕುಟೀರ ನಿರ್ಮಿಸಿಕೊಂಡು ಕಾಲಕ್ಷೇಪ ಮಾಡುತ್ತಿದ್ದನು. ಅನಾಥಳಾಗಿ ಬಿಟ್ಟಂತಹ ಅತ್ತಿಗೆಯನ್ನೂ, ಮಹಿಮಾ ಪುರಿ ಸಿಂಹಾಸನಕ್ಕೆ ವಾರಸನಾದ ಅವಳ ಕುಮಾರ ನನ್ನೂ ನೋಡಲಿಕ್ಕೆ ಕೂಡಾ ಹೋಗಲಿಲ್ಲ'' ಎಂದು ಹೇಳುವಾಗ ಮುನಿಯ ಕಂಗಳ ತುಂಬಾ ನೀರು ತುಂಬಿ ಕೆಳ ಜಾರಿ ಮುತ್ತಿನ ಬಿಂದುಗಳ ಹಾಗೆ ನೆಲಕ್ಕೆ ಬಿದ್ದು ಹೊಳೆದುವು.

“ಅವಳ ಕುಮಾರನ ಹೆಸರೇನೆಂದು ನೀವು



ಹೇಳಲೇ ಇಲ್ಲ'' ಎಂದು ಕೇಳಿದಳು ಯುವರಾಣಿ ವಿದ್ಯಾವತಿ. ಅವಳ ಕಂಠಸ್ವರದಲ್ಲಿ ಕುತೂಹಲ ತುಂಬಿ ತುಳುಕುತ್ತಿತ್ತು.

"ಇಲ್ಲಿಯೇ ಇರುವನಲ್ಲಾ. ಈ ಮಹೇಂದ್ರ ನಾಥನೇ'' ಎಂದನು ಮುನಿ ಆಪ್ಯಾಯತೆಯಿಂದ.

ಮಹೇಂದ್ರನಾಥನು ಮುನಿ ತನ್ನ ಚಿಕ್ಕತಂದೆ ಜಿತೇಂದ್ರನಾಥನೆಂದು ತಿಳಿದು "ಹಾಗಾದರೆ ನೀವು ನನ್ನ ಚಿಕ್ಕಪ್ಪನಲ್ಲವೇ? ನಾನು ಕನಸಿನಲ್ಲೂ ಊಹಿಸಿರಲಿಲ್ಲ'' ಎಂದು ಅವನನ್ನು ಆಪ್ಯಾಯತೆಯಿಂದ ಆಲಿಂಗಿಸಿಕೊಂಡನು.

"ನಾನು ರಾಜಧಾನಿಗೆ ಬಂದು ಮಹಾರಾಜರೊಂದಿಗೆ ಎರಡು ಕರ್ತವ್ಯಗಳನ್ನು ನೆರವೇರಿಸಬೇಕಾಗಿದೆ. ಮಹೇಂದ್ರನಾಥನು ಯಾರೆಂಬುದನ್ನು ತಿಳಿಸಬೇಕು; ಮಹೇಂದ್ರನಾಥನ ತಾಯಿಗೆ ಏನೂ ಹೇಳದೆ ಮನೆ ಬಿಟ್ಟು ಓಡಿ ಬಂದುದಕ್ಕೆ, ಅವಳ ಹತ್ತಿರ ಕ್ಷಮೆ ಕೇಳಿಕೊಳ್ಳಬೇಕು. ಆಮೇಲೆ ನಾನು ಇಲ್ಲಿಗೆ ಬಂದು ಕುಟೀರವಿರುವ ಪ್ರಶಾಂತ ವಾತಾವರಣದಲ್ಲಿ ಜೀವಿತಶೇಷ ಕಾಲವನ್ನು ಕಳೆಯಬೇಕು ಎಂದು ನಿಶ್ಚಯಿಸಿದ್ದೇನೆ'' ಎಂದನು ಮುನಿ.

ಮಹೇಂದ್ರನಾಥನೂ, ವಿದ್ಯಾವತಿಯೂ ಏನೋ ಹೇಳಲಿದ್ದರೂ ಮುನಿ ಕೈ ಸನ್ನೆಯಿಂದ ಅವರನ್ನು ತಡೆದು, "ನೀವೀಗ ಒಳಗೆ ಹೋಗಿ ಆಶ್ರಮವಾಸಿಗಳ ದುಸ್ತು ಧರಿಸಿಕೊಳ್ಳಿರಿ. ಒಳಗೆ ಅದಕ್ಕೆ ಕೋಣೆಗಳಿವೆ. ನಾನೂ ನಿಮ್ಮೊಂದಿಗಿರುವುದರಿಂದ, ನಿಮ್ಮನ್ನು ಯಾರೂ ಗುರುತು ಹಿಡಿಯಲಾರರು. ನಿಮ್ಮನ್ನು ನನ್ನ ಶಿಷ್ಯರೆಂದೇ ತಿಳಿದುಕೊಳ್ಳುತ್ತಾರೆ. ಈಗಲೇ ಹೊರಟರೆ ಸೂರ್ಯಾಸ್ತವಾಗುವುದರೊಳಗೆ ರಾಜಧಾನೀ ನಗರವನ್ನು ಸೇರಿ ಬಿಡುತ್ತೇವೆ'' ಎಂದನು.

"ನನಗೆ ಈಗಲೇ ರಾಜಧಾನೀ ನಗರವನ್ನು ಸೇರಿಕೊಂಡ ಹಾಗೆ ಸಂತೋಷವಾಗಿದೆ. ರೆಕ್ಕೆ ಬಂದು ಆಕಾಶದಲ್ಲಿ ಹಾರುತ್ತಿರುವೆನೇನೋ ಎಂದು ಅನ್ನಿಸುತ್ತದೆ. ನಿಮ್ಮ ಉಪಕಾರ ಮರೆಯಲು ಸಾಧ್ಯವಿಲ್ಲ ಮಹಾತ್ಮಾ'' ಎಂದು ಹೇಳಿ, ಯುವರಾಣಿ ಕುಟೀರದೊಳಗೆ ಹೋಗಿ ಆಭರಣ ಅಲಂಕಾರಗಳನ್ನು ಕ್ಷಣ ಮಾತ್ರದಲ್ಲಿ ತೆಗೆದು ಹಾಕಿ, ಮುನಿಕುಮಾರಿಯಾಗಿ ವೇಷ ಮಾರ್ಪಾಡು ಮಾಡಿಕೊಂಡು ಹೊರಗೆ ಬಂದಳು. ಈಗ ಅವಳನ್ನು ಯಾರೂ ಗುರುತು ಹಿಡಿಯುವಂತಿರಲಿಲ್ಲ.

ಮಹೇಂದ್ರನಾಥನೂ ಮುನಿಕುಮಾರನಂತೆ ತಯಾರಾದನು.

ಮೂವರೂ ವೀರಗಿರಿ ರಾಜ್ಯದ ಕಡೆಗೆ ಹೊರಟರು.

—(ಮುಂದಿನ ಸಂಚಿಕೆಯಲ್ಲಿ ಮುಕ್ತಾಯ)





# ಮಾಯಾಭವನ

೧೨

[ಮಾಯಾಭವನದಿಂದ ತಪ್ಪಿಸಿಕೊಂಡ ಯುವರಾಣಿ ವಿದ್ಯಾವತಿ, ಮಹೇಂದ್ರನಾಥರು ಸಾಯಂಕಾಲದ ವೇಳೆಗೆ ಬೆಟ್ಟದ ತಪ್ಪಲಿನಲ್ಲಿದ್ದ ಮುನಿಯ ಪರ್ಣಶಾಲೆಯನ್ನು ತಲುಪಿದರು. ಅವರನ್ನು ನೋಡಿ ಸಂತೋಷಗೊಂಡ ಮುನಿಯು ತನ್ನ ವೃತ್ತಾಂತವನ್ನು ತಿಳಿಸಿದನು. ಮುನಿಯು ತನ್ನ ಚಿಕ್ಕಪ್ಪ ಜಿತೇಂದ್ರನಾಥನೇ ಎಂಬುದನ್ನು ಮಹೇಂದ್ರನಾಥನು ಗ್ರಹಿಸಿದನು. ಮೂವರೂ ಕೂಡಿ ವೀರಗಿರಿ ರಾಜ್ಯಕ್ಕೆ ಹೊರಟರು. ನಂತರ]

ಯುವರಾಣಿಯು ಕಾಣದೇ ಹೋಗಿ ಎರಡು ವಾರಗಳು ಕಳೆದು ಹೋಗಿದ್ದವು. ಇನ್ನೂ ಆಕೆಯ ಜಾಡೇ ತಿಳಿಯಬಾರದ್ದರಿಂದ ರಾಜನು ಆಗಿನ ಗ್ರಹಸ್ಥಿತಿ ಹೇಗಿದೆಯೋ ತಿಳಿದುಕೊಳ್ಳಲು ವಾಚಸ್ಪತಾಚಾರ್ಯರನ್ನು ಕರೆಯಿಸಿದನು. ವಾಚಸ್ಪತಾಚಾರ್ಯರು ಬಂದು, ರಾಜದಂಪತಿಗಳಿಗೆ ನಮಸ್ಕರಿಸಿದರು. ಆಗ ಅಲ್ಲೇ ಇದ್ದ ಸೇನಾಧಿಪತಿ ಉಗ್ರಸೇನನು, "ಜಗತ್ಪತಾಚಾರ್ಯರ ವಿಷಯವೇನಾದರೂ ತಿಳಿಯಿತೇ?" ಎಂದು ಕೇಳಿದನು.

ರಾಜನಾದ ವೀರಸೇನನು "ಜಗತ್ಪತಿ, ಇತರ ಜ್ಯೋತಿಷ್ಯರೊಂದಿಗೆ ಚರ್ಚಿಸಿದ ವಿಷಯಗಳೇನಾದರೂ ತಿಳಿಯಿತೇ ಆಚಾರ್ಯರೆ?" ಎಂದು ಕೇಳಿದನು.

"ಈ ದಿನದ ವರೆಗೆ ಯಾವ ವಿಷಯವೂ ತಿಳಿಯಲಿಲ್ಲ. ಆದರೆ ನಾನು ನನ್ನ ಶಿಷ್ಯ ಮಂಜುನಾಥನನ್ನು ವಿವರಗಳನ್ನು ತಿಳಿದು ಬರಲು ಕಳಿಸಿದ್ದೇನೆ. ಅವನು ನಾಳೆಯೋ ನಾಡಿದ್ದೋ ಬರಬಹುದೆಂದು ನನ್ನ ನಂಬಿಕೆ. ಯುವರಾಣಿಯ ಜಾತಕದ



ಪ್ರಕಾರ ಆಕೆಗೆ ಈಗ ಒಳ್ಳೆಯ ಕಾಲ ಹತ್ತಿರಕ್ಕೆ ಬಂದಿದೆ. ಗ್ರಹಬಲದ ಪ್ರಕಾರ ಆಕೆ ಈ ವೇಳೆಗೆ ರಾಜಧಾನಿಯನ್ನು ತಲುಪಿರಬೇಕು'' ಎಂದು ಹೇಳಿದನು ವಾಚಸ್ಪತಾಚಾರ್ಯ.

"ಲಕ್ಷಣವಾದ ಮಾತನ್ನು ಹೇಳಿದಿರಿ ಆಚಾರ್ಯರೇ? ನನ್ನ ಮಗು ಕ್ಷೇಮವಾಗಿ ಬಂದು ಸೇರಬೇಕೆಂದು ಭಗವಂತನನ್ನು ದಿನವೂ ಪ್ರಾರ್ಥಿಸುತ್ತಿದ್ದೇನೆ'' ಎಂದಳು ರಾಣಿ ವಜ್ರೇಶ್ವರಿ ದೇವಿ ಆನಂದಭರಿತಳಾಗಿ.

"ಉಗ್ರಸೇನಾ, ನಗರದ ಮುಖ್ಯ ಬೀದಿಗಳಲ್ಲೆಲ್ಲಾ ಭಟರನ್ನು ಜಾಗರೂಕತೆಯಿಂದ ಇರಲು ಆಜ್ಞಾಪಿಸು'' ಎಂದನು ರಾಜ ಸೇನಾಧಿಪತಿ ಉಗ್ರಸೇನನೊಂದಿಗೆ.

"ಅಪ್ಪಣೆ ಮಹಾರಾಜಾ!'' ಎಂದು ಹೇಳಿ ಅವನು ಅಲ್ಲಿಂದ ಅರಮನೆಯ ಹೊರಭಾಗದ ಕಡೆಗೆ ಹೊರಟನು. ಆಗ ಭಟನೊಬ್ಬ ಎದುರಾಗಿ ಬಂದು, ಸೇನಾಧಿಪತಿಗೆ ನಮಸ್ಕರಿಸಿ "ಪ್ರಭೂ! ರಾಜಪ್ರಾಸಾದದ ಮುಂದೆ ಒಂದು ಪಲ್ಲಕಿ ನಿಂತಿದೆ. ಪಲ್ಲಕಿಯೊಂದಿಗೆ ಮೂವರು ಕುದುರೆಗಳ ಮೇಲೆ ಬಂದಿದ್ದಾರೆ. ಅವರಲ್ಲಿ ಒಬ್ಬನು ರಾಜನ ದರ್ಶನಕ್ಕೆ ಅನುಮತಿ ಕೊಡಬೇಕೆಂದು ಕೋರುತ್ತಿದ್ದಾನೆ!'' ಎಂದು ಹೇಳಿದನು.

"ಅವನು ತನ್ನ ಹೆಸರೇನೆಂಬುದನ್ನು ಹೇಳಿದನಾ?'' ಎಂದು ಕೇಳಿದನು ಸೇನಾಧಿಪತಿ.

"ಇಲ್ಲ ಪ್ರಭೂ! ನೋಡಲು ಯಾವುದೋ ರಾಜವಂಶಕ್ಕೆ ಸೇರಿದ ವ್ಯಕ್ತಿಯಂತಿದ್ದಾನೆ'' ಎಂದು ಹೇಳಿದನು ಆ ಭಟ.

"ಪಲ್ಲಕಿಯೊಳಗೆ ಯಾರಿದ್ದಾರೋ ನೋಡಿದೆಯಾ?'' ಎಂದು ಕೇಳಿದನು ಕುತೂಹಲದಿಂದ ಸೇನಾಧಿಪತಿ.

"ಇಲ್ಲ ಪ್ರಭೂ! ತೆರೆ ಅಡ್ಡವಾಗಿದೆ'' ಭಟನೆಂದನು.

"ಸರಿ, ಹೊರಡು, ನಾನು ಈಗಲೇ ಬರುತ್ತೇನೆ'' ಎಂದು ಹೇಳಿ ಸೇನಾಧಿಪತಿ ಒಳಗೆ ಹೋಗಿ, ಇನ್ನೂ ವಾಚಸ್ಪತಾಚಾರ್ಯರೊಂದಿಗೆ ಮಾತನಾಡುತ್ತಿದ್ದ ರಾಜದಂಪತಿಗಳಿಗೆ ಈ ಸಂಗತಿಯನ್ನು ಹೇಳಿದನು.

ಕೂಡಲೇ ರಾಣಿ ವಜ್ರೇಶ್ವರೀ ದೇವಿ, "ಪ್ರಭೂ! ಪಲ್ಲಕಿಯಲ್ಲಿ ನಮ್ಮ ಮಗಳು ಇದ್ದಾಳೇನೋ! ಯಾವ ರಾಜಕುಮಾರನೋ ಅವಳನ್ನು ಕಾಪಾಡಿ ತಂದಿರಬಹುದು. ಬನ್ನಿ ಹೋಗಿ ನೋಡೋಣ'' ಎಂದಳು ಕಾತುರತೆಯಿಂದ.

"ಬಂದಿರುವುದು ನಮ್ಮ ಮಗಳು ವಿದ್ಯಾವತಿಯೇ ಆಗಿದ್ದರೆ, ಆಕೆ ಇನ್ನೂ ಯಾಕೆ ಪಲ್ಲಕಿಯಲ್ಲೇ ಇರುತ್ತಾಳೆ? ರಾಜಭವನವು ಆಕೆಗೆ ಹೊಸದೇನೂ ಅಲ್ಲವಲ್ಲಾ? ಈ ವೇಳೆಗೆ ಒಳಗೆ ಬಂದಿರುತ್ತಿದ್ದಳಲ್ಲವೇ?'' ಎನ್ನುತ್ತಾ, ರಾಜನು ಆಸನವನ್ನು

ಬಿಟ್ಟು, ಮೂವರೂ ಸೇನಾಧಿಪತಿಯೊಂದಿಗೆ ಭವನದ ಹೊರಭಾಗಕ್ಕೆ ಹೊರಟರು.

ಅವರು ಭವನದ ಹೆಬ್ಬಾಗಿಲನ್ನು ಸೇರುವ ವೇಳೆಗೆ ಪಲ್ಲಕಿಯನ್ನು ಇಳಿಸಲಾಗಿತ್ತು. ಕುದುರೆಗಳ ಮೇಲೆ ಬಂದ ಮೂವರಲ್ಲಿ ಒಬ್ಬ ವ್ಯಕ್ತಿ ಕುದುರೆಯಿಂದ ಇಳಿದು ಒಳಗೆ ಬರುತ್ತಾ ರಾಜನಿಗೆ ಭಕ್ತಿಪೂರ್ವಕವಾಗಿ ನಮಸ್ಕರಿಸಿದನು.

ರಾಜನು "ನೀನು.." ಎಂದು ಏನೋ ಹೇಳಲು ಹೊರಟಾಗ ಅವನು ಅಡ್ಡ ಬಂದು "ಹಿಮಗಿರಿ ರಾಜ್ಯವನ್ನು ಪಾಲಿಸಿದ ತ್ರಿಲೋಕಪತಿಯ ಮೊಮ್ಮಗ" ಎಂದನು.

"ಹಿಮಗಿರಿ ರಾಜ ಉಮಾಪತಿಯಲ್ಲವೇ?" ಎಂದನು ಮಹಾರಾಜ ಅವನ ಕಡೆಗೆ ಅನುಮಾನದಿಂದ ನೋಡುತ್ತಾ.

"ನಿಜವೇ ಮಹಾರಾಜ. ಅವನು ತ್ರಿಲೋಕಪತಿಯನ್ನು ಸಿಂಹಾಸನದಿಂದ ಉರುಳಿಸಿ ಅದನ್ನು ತಾನು ಆಕ್ರಮಿಸಿಕೊಂಡಿದ್ದಾನೆ. ನಾನು ತ್ರಿಲೋಕಪತಿಯ ತಮ್ಮನಾದ ಕೈಲಾಸಪತಿಯ ಮೊಮ್ಮಗ. ಉಮಾಪತಿ ಹಿಮಗಿರಿಯ ಸಿಂಹಾಸನವನ್ನು ಆಕ್ರಮಿಸಿದ ನಂತರ, ನಮ್ಮ ತಾತ ಕೈಲಾಸಪತಿ, ತಂದೆ ಗಜಪತಿ ಮತ್ತು ನಾನು ರಾಜ್ಯವನ್ನು ಬಿಟ್ಟು ಬರಬೇಕಾದ ಪರಿಸ್ಥಿತಿ ಏರ್ಪಟ್ಟಿತು. ನನ್ನ ಹೆಸರು ಜಗತ್ಪತಿ" ಎಂದು ವಿವರಿಸಿದನು ಆ ವ್ಯಕ್ತಿ.

ಜಗತ್ಪತಿ ಎಂಬ ಹೆಸರನ್ನು ಕೇಳಿದೊಡನೇ ರಾಜನೂ, ವಾಚಸ್ಪತಾಚಾರ್ಯರೂ ಆಶ್ಚರ್ಯದಿಂದ ಒಂದು ಕ್ಷಣ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಅವರ ಮನಸ್ಸಿನಲ್ಲಿ ಅನೇಕ ಪ್ರಶ್ನೆಗಳು ಸುಳಿದಾಡಿದವು.

ಉಗ್ರಸೇನನ ಬಲಗೈ ಅವನ ನಡುವಿನಲ್ಲಿ ನೇತಾಡುತ್ತಿದ್ದ ಕತ್ತಿಯ ಒರೆಯ ಮೇಲೆ ಸೇರಿ



ಅದರ ಹಿಡಿಯನ್ನು ಭದ್ರವಾಗಿ ಹಿಡಿದುಕೊಂಡಿತು.

"ನಾನು ನಿಮಗೊಂದು ಶುಭ ವಾರ್ತೆಯನ್ನು ತಂದಿದ್ದೇನೆ ಪ್ರಭೂ! ನಿಮ್ಮ ಕುಮಾರಿ ವಿದ್ಯಾವತಿಯನ್ನು ರಕ್ಷಿಸಿ ಕರೆ ತಂದಿದ್ದೇನೆ. ಆಕೆ ಪಲ್ಲಕಿಯಲ್ಲಿದ್ದಾಳೆ" ಎಂದನು ಜಗತ್ಪತಿ ಪಲ್ಲಕಿಯ ಕಡೆಗೆ ಕೈ ತೋರಿಸುತ್ತಾ.

"ನನ್ನ ಮುದ್ದು ಮಗಳು ವಿದ್ಯಾವತಿ ಪಲ್ಲಕಿಯಲ್ಲಿದ್ದಾಳೆಯೇ!" ಎನ್ನುತ್ತಾ ರಾಣಿ ಆ ದಿಕ್ಕಿನಲ್ಲಿ ಹೆಜ್ಜೆ ಹಾಕಿದಳು.

ಮಹಾರಾಜನು ಆಕೆಯನ್ನು ನೋಟದಿಂದಲೇ ತಡೆಯುತ್ತಾ, "ಪಲ್ಲಕಿಯಲ್ಲಿರುವುದು ವಿದ್ಯಾವತಿಯಾದ ಪಕ್ಷದಲ್ಲಿ ಆಕೆ ಏಕೆ ಇನ್ನೂ ಇಳಿದು ಬರುತ್ತಿಲ್ಲ? ಅರಮನೆ ಆಕೆಗೆ ಹೊಸದೇನೂ ಅಲ್ಲ ತಾನೇ? ಆಕೆ ಆರೋಗ್ಯವಾಗಿದ್ದಾಳೆ ತಾನೇ?" ಎಂದು ಜಗತ್ಪತಿಯನ್ನು ಕೇಳಿದನು.




ಮಗಳಂತೆಯೇ ಇದ್ದ ಆ ಯುವತಿಯ ನೋಟದಲ್ಲಿ ಅಂತಹ ಅಂಜಿಕೆ ಏಕೆ ಬಂದಿತೋ ರಾಜದಂಪತಿಗಳಿಗೆ ಅರ್ಥವಾಗಲಿಲ್ಲ.

ಸೇನಾಧಿಪತಿ ಒಂದೇ ನೆಗೆತದಲ್ಲಿ ಮುಂದಕ್ಕೆ ನುಗ್ಗಿ, ಜಗತ್ಪತಿಯ ಕೈಯನ್ನು ಹಿಡಿದುಕೊಂಡು "ಈ ಯುವತಿ ಯುವರಾಣಿ ವಿದ್ಯಾವತಿಯಲ್ಲ, ನೀನು ತಪ್ಪು ತಿಳಿದಂತಿದೆ'' ಎಂದನು ಅಧಿಕಾರವನ್ನು ಸೂಚಿಸುವ ಕಂಠಸ್ವರದಿಂದ.

"ಆಕೆ ಯುವರಾಣಿ ವಿದ್ಯಾವತಿ. ಅದರಲ್ಲಿ ಏನೂ ಸಂದೇಹವಿಲ್ಲ!'' ಎಂದನು ಜಗತ್ಪತಿ.

"ಅದು ನಿನಗೆ ಅಷ್ಟು ಖಚಿತವಾಗಿ ಹೇಗೆ ಗೊತ್ತು? ಯುವರಾಣಿಯನ್ನು ಇದಕ್ಕೆ ಮುಂಚೆ ಎಂದಾದರೂ ನೋಡಿದ್ದೀಯಾ?'' ಎಂದು ಕೇಳಿದನು ಸೇನಾಧಿಪತಿ.

"ಆಕೆ ಸುರಕ್ಷಿತವಾಗಿಯೇ ಇದ್ದಾಳೆ ಪ್ರಭೂ! ಆಕೆಯನ್ನು ಈಗಲೇ ಹೊರಬರುವಂತೆ ಹೇಳುತ್ತೇನೆ'' ಎಂದೆನ್ನುತ್ತಾ ಜಗತ್ಪತಿ ಪಲ್ಲಕಿಯನ್ನು ಸಮೀಪಿಸಿ ತೆರೆಯನ್ನು ಪಕ್ಕಕ್ಕೆ ಸರಿಸಿ, "ಬಾ, ಯುವರಾಣಿ, ನಿನ್ನ ತಂದೆತಾಯಿಗಳು ನಿನಗಾಗಿ ಕಾತುರದಿಂದ ಕಾದಿದ್ದಾರೆ'' ಎಂದನು.

ಪಲ್ಲಕಿಯಲ್ಲಿ ಕುಳಿತಿದ್ದ ಮಾಲಿನಿ ತನ್ನನ್ನು ಯಾರೋ ಯುವರಾಣಿ ಎಂದು ಸಂಬೋಧಿಸಿದ್ದನ್ನು ಕೇಳಿ ತಬ್ಬಿಬ್ಬಾದಳು. "ಯುವರಾಣಿ ಬೇಗ ಹೊರಗೆ ಬಾ! ನಿನ್ನನ್ನು ನೋಡಲು ನಿನ್ನ ತಂದೆತಾಯಿಗಳು ಕಾತುರರಾಗಿದ್ದಾರೆ!'' ಎಂದು ಎಚ್ಚರಿಸಿ, ಜಗತ್ಪತಿ ರಾಜದಂಪತಿಗಳು ಇದ್ದ ಜಾಗಕ್ಕೆ ಹೊರಟನು.

ತೆರೆಯನ್ನು ಸರಿಸಿ ಹೊರಗೆ ಬಂದ ಮಾಲಿನಿ ಅಂಜಿಕೆಯಿಂದ ಅತ್ತ ಇತ್ತ ನೋಡುತ್ತಾ ಹೆಜ್ಜೆಗಳನ್ನು ಹಾಕತೊಡಗಿದಳು. ದೂರದಿಂದ ನೋಡಿದರೆ ತಮ್ಮ

ಆ ಪ್ರಶ್ನೆಗೆ ನೇರವಾಗಿ ಉತ್ತರ ಕೊಡದೆ, "ನಾನು ಆಕೆಯನ್ನು ದುಷ್ಟರ ಹಿಡಿತದಿಂದ ರಕ್ಷಿಸಿ ನನ್ನ ಭವನಕ್ಕೆ ಕರೆದೊಯ್ದು ಆಕೆಗಿದ್ದ ನೀಚಗ್ರಹ ಗಳ ದುಷ್ಟ ಪ್ರಭಾವವು ನೀಗುವವರೆಗೂ ಆಕೆಗೆ ಯಾವ ತೊಂದರೆಯೂ ಇಲ್ಲದಂತೆ ಕಾಪಾಡಿ, ಈಗ ಇಲ್ಲಿಗೆ ಕರೆದು ತಂದಿದ್ದೇನೆ'' ಎಂದು ಹೇಳಿದನು ಜಗತ್ಪತಿ.

"ಯುವರಾಣಿಯ ಮೇಲೆ ದುಷ್ಟ ಗ್ರಹಗಳ ಪ್ರಭಾವ ಬಿದ್ದಿರುವುದೆಂಬುದು ನಿನಗೆ ಹೇಗೆ ತಿಳಿಯಿತು?'' ಎನ್ನುತ್ತಾ ವಾಚಸ್ಪತ್ಯಾಚಾರ್ಯರು ಮುಂದೆ ಬಂದು ಜಗತ್ಪತಿಯ ಮತ್ತೊಂದು ಕೈಯನ್ನು ಹಿಡಿದುಕೊಂಡರು.

"ಆ ವಿಷಯವನ್ನು ನನಗೆ ಜ್ಯೋತಿಷ್ಯ ಪಂಡಿತರು ಹೇಳಿದರು'' ಎಂದನು ಜಗತ್ಪತಿ.

"ನೀನು ಇಷ್ಟು ದಿನಗಳು ಕಾಣದೇ ಹೋದದ್ದಕ್ಕೆ ಇದೇ ಕಾರಣವೇ? ವಿಶ್ವಾಸಘಾತಕನೇ, ಯುವ



ಹೋದನು. ಅವನು ಹೆಬ್ಬಾಗಿಲನ್ನು ಸಮೀಪಿಸಿ ಕುದುರೆಯ ಮೇಲೆ ಏರಬೇಕೆಂದಿರುವಾಗ, ಅಲ್ಲಿಗೆ ಬಂದ ಮಹೇಂದ್ರನಾಥನು ಯಾವನೋ ಕೈಯಲ್ಲಿ ಹಾರವನ್ನು ಹಿಡಿದುಕೊಂಡು ಓಡಿಹೋಗುತ್ತಿದ್ದಾನೆಂದು ಭಾವಿಸಿ ಅವನಿಗೆ ಎದುರಾದನು. ಅವನ ಕೈಯನ್ನು ಹಿಡಿದೆಳೆದು, ಅವನನ್ನು ಕೆಳಕ್ಕೆ ತಳ್ಳಿ ಮತ್ತೊಂದು ಕೈಯಿಂದ ಅವನು ತಲೆಗೆ ಹಾಕಿಕೊಂಡಿದ್ದ ಕಿರೀಟದಂತಹ ರುಮಾಲು ಕೆಳಗೆ ಬೀಳುವಂತೆ ಹೊಡೆದನು. ಅದರಿಂದ ಜಗತ್ಪತಿಯ ಕೈಯಲ್ಲಿದ್ದ ಹಾರವು ತಾಯಿತದೊಂದಿಗೆ ಮಹೇಂದ್ರನಾಥನ ಕೈಗೆ ಬಂದಿತು.

ಅದನ್ನು ಬಿಗಿಯಾಗಿ ಹಿಡಿದು ಮಹೇಂದ್ರನಾಥನು "ನಿನ್ನ ಮಂತ್ರ ತಂತ್ರಗಳು ಇನ್ನು ನಡೆಯಲಾರವು" ಎಂದನು. ಅಷ್ಟರಲ್ಲಿ ರಾಜದಂಪತಿಗಳೊಂದಿಗೆ ಅಲ್ಲಿಗೆ ಬಂದ ವಾಚಸ್ಪತಾಚಾರ್ಯರು "ಆ ದುರ್ಮಾರ್ಗನನ್ನು ಹಿಡಿದು ಬಂಧಿಸಿರಿ" ಎಂದು ಆಜ್ಞಾಪಿಸಿದನು.

ಕೂಡಲೇ ಜಗತ್ಪತಿಯನ್ನು ಹಿಡಿದು ಕೈ ಕಾಲುಗಳನ್ನು ಕಟ್ಟಿ ಬಂಧಿಸಿದರು. ಆಗ ಸೇನಾಧಿಪತಿ ಮಹೇಂದ್ರನಾಥನನ್ನು ಗುರುತಿಸಿ "ನೀನು ಬಂದೆಯಾ? ಈ ದುರ್ಮಾರ್ಗನನ್ನು ಹಿಡಿಯಲು ಸಹಾಯ ಮಾಡಿದ್ದು ನೀನೇನಾ? ಶಾಭಾಷ್, ಯುವರಾಣಿ ಎಲ್ಲಿದ್ದಾಳೋ? ಕಂಡು ಹಿಡಿದೆಯಾ?" ಎಂದು ಕೇಳಿದನು.

"ಇಲ್ಲೇ ಇದ್ದೇನೆ ಮಾವಾ!" ಎಂದಳು ಯುವರಾಣಿ ವಿದ್ಯಾವತಿ. ಆ ಇಂಪಾದ ಕಂಠಸ್ವರವು ಕೇಳಿಸಿದ ಕಡೆಗೆ ತಿರುಗಿದ ಸೇನಾಧಿಪತಿ, ಮುನಿಕುಮಾರಿಯಂತಿದ್ದ ವಿದ್ಯಾವತಿಯನ್ನು ನೋಡಿ, ನಗುತ್ತಾ "ಸ್ವಾಮೀ ವಿದ್ಯಾವತಿ ಹಿಂದಿರುಗಿ ಬಂದಿದ್ದಾಳೆ" ಎಂದನು.

ರಾಣಿಯ ಗ್ರಹಸ್ಥಿತಿಯನ್ನು ತಿಳಿದುಕೊಂಡು ನೀನೇ ಆಕೆಯನ್ನು ಅಪಹರಿಸಿಕೊಂಡು ಹೋಗಿ, ಎಲ್ಲೋ ಬಚ್ಚಿಟ್ಟಿದ್ದೀಯೆ! ಆಕೆಯನ್ನು ತಂದು ರಾಜನಿಗೆ ಒಪ್ಪಿಸಲು ಒಳ್ಳೆಯ ಮುಹೂರ್ತಕ್ಕಾಗಿ ಜ್ಯೋತಿಷ್ಯ ಪಂಡಿತರೊಂದಿಗೆ ನೀನು ಚರ್ಚೆಯನ್ನು ನಡೆಸಿದೆ ಎಂದಂತಾಯ್ತು! ಜಗತ್ಪತೀ ನಿನ್ನ ನೀಚ ಕೃತ್ಯಕ್ಕೆ ನನಗೆ ತಲೆ ಬಾಗಿಸುವಂತಾಗುತ್ತಿದೆ" ಎನ್ನುತ್ತಾ ವಾಚಸ್ಪತಾಚಾರ್ಯರು ಅವನ ಕೈಯನ್ನು ಬಿಟ್ಟರು.

ಕೂಡಲೇ ಜಗತ್ಪತಿ ತನ್ನ ಕಂಠಹಾರದಲ್ಲಿದ್ದ ತಾಯಿತವನ್ನು ಬಲವಾಗಿ ಹಿಡಿದುಕೊಂಡನು. ಒಡನೆ ಮಿಂಚೊಂದು ಮಿಂಚಿ ಮರುಕ್ಷಣದಲ್ಲೇ ಆ ಪ್ರದೇಶವನ್ನೆಲ್ಲಾ ದಟ್ಟವಾದ ಹೊಗೆ ಆವರಿಸಿತು. ಅದೇ ಸಮಯವೆಂದುಕೊಂಡು ಜಗತ್ಪತಿ ಸೇನಾಧಿಪತಿಯ ಹಿಡಿತದಿಂದ ಎರಡನೇ ಕೈಯನ್ನು ಬಿಡಿಸಿಕೊಂಡು ಭವನದ ಹೊರಗಡೆಗೆ ಓಡಿ



"ಬಂದೆಯಾ ತಾಯಿ! ಚೆನ್ನಾಗಿದ್ದೀಯೆ ತಾನೇ?" ಎಂದೆನ್ನುತ್ತಾ ರಾಣಿ ಆನಂದಭಾಷ್ಪಗಳನ್ನು ಸುರಿಸುತ್ತಾ ಯುವರಾಣಿಯನ್ನು ಬಿಗಿದಪ್ಪಿಕೊಂಡಳು.

"ವಿದ್ಯಾವತಿ, ಏನೀ ವೇಷ..." ಎನ್ನುತ್ತಾ ರಾಜನು ಆಕೆಯ ತಲೆಯನ್ನು ಪ್ರೀತಿಯಿಂದ ನೇವರಿಸಿದನು.

ಅದೇ ವೇಳೆಗೆ ಮಾಲಿನಿ ಬಂದು ಯುವರಾಣಿಗೆ ನಮಸ್ಕರಿಸಿದಳು. "ಪಲ್ಲಕಿಯಲ್ಲಿ ಬಂದಿದ್ದು ನೀನು ಎನ್ನು" ಎಂದಳು ಯುವರಾಣಿ ನಗುಮುಖದಿಂದ.

ನಂತರ ಮಹೇಂದ್ರನಾಥನು ರಾಜನನ್ನು ಸಮೀಪಿಸಿ ನಮಸ್ಕಾರ ಮಾಡಿ, "ಮಹಾಪ್ರಭೂ! ನಾನು ಕೈ ಹಿಡಿದ ಕೆಲಸದಲ್ಲಿ ವಿಜಯವನ್ನು ಸಾಧಿಸಿದ್ದೇನೆ. ಯುವರಾಣಿಯನ್ನು ಹುಡುಕಿ ತಂದು ತಮಗೆ ಒಪ್ಪಿಸಿದ್ದಕ್ಕೆ ನನಗೆ ಎಷ್ಟೋ ಸಂತೋಷ ವಾಗುತ್ತಿದೆ. ಆ ಕೆಲಸವು ಸುಲಭವಾಗುವಂತೆ ದಾರಿಯ ಮಧ್ಯದಲ್ಲಿ ನನ್ನ ಚಿಕ್ಕಪ್ಪನವರ ಆಶೀರ್ವಾದವು ಕೂಡಾ ಲಭಿಸಿತು" ಎಂದೆನ್ನುತ್ತಾ ಪಕ್ಕದಲ್ಲೇ ಮಂದಹಾಸ ಬೀರುತ್ತಾ ಇದ್ದ ಮುನಿಯನ್ನು ತೋರಿಸಿದನು.

ರಾಜನು ಮುನಿಯ ಕಡೆಗೆ ಆಶ್ಚರ್ಯದಿಂದ ನೋಡಿದನು.

"ಇವರು ನಮ್ಮ ಚಿಕ್ಕಪ್ಪ. ಮಹಿಮಾಪುರಿಗೆ ಸೇರಿದ ಜಿತೇಂದ್ರನಾಥರು, ಸನ್ಯಾಸವನ್ನು ಸ್ವೀಕರಿಸಿದ್ದಾರೆ" ಎಂದನು ಮಹೇಂದ್ರನಾಥ.

"ದೇವಿಯ ಗುಡಿಗೆ ದರ್ಶನಕ್ಕಾಗಿ ಬಂದಿದ್ದಾಗ, ರಾಜ ವೀರೇಂದ್ರನಾಥನನ್ನು ನೋಡಿದೆ. ಅವನು ಶತ್ರುಗಳ ಕೈಗೆ ಸಿಕ್ಕಿ ಮರಣ ಹೊಂದಿದನೆಂದು ಕೇಳಿದೆ, ತಾವು...?" ಎಂದನು ರಾಜ.

"ನಮ್ಮಣ್ಣ ಸುರೇಂದ್ರನಾಥನು ಯುದ್ಧದಲ್ಲಿ ಮಡಿದನು. ಆಗ ಮಗುವಾಗಿದ್ದ ಮಹೇಂದ್ರನಾಥನೂ, ಅವನ ತಾಯಿಯೂ ನಾನೂ ಮಹಿಮಾಪುರಿ ರಾಜ್ಯವನ್ನು ಬಿಟ್ಟು ಹೊರಟೆವು. ಕೆಲವು ದಿನಗಳ ನಂತರ ನಾನು ಸನ್ಯಾಸವನ್ನು ಸ್ವೀಕರಿಸಿದೆ. ಯುವರಾಣಿಯನ್ನು ಹುಡುಕಲು ಬಂದ ಮಹೇಂದ್ರನಾಥನು ದೇವರ ದಯೆಯಿಂದ ನನಗೆ ಸಿಕ್ಕಿದನು. ಅವನೇ ಮಹಿಮಾಪುರಿ ರಾಜ್ಯಕ್ಕೆ ವಾರಸುದಾರನೆಂದು ತಮಗೆ ತಿಳಿಯಪಡಿಸಿ ಅವನ ತಾಯಿಯ ಕ್ಷಮೆಯನ್ನು ಯಾಚಿಸಿ ಹೋಗಿ ಬರೋಣವೆಂದೇ ನಾನು ಬಂದದ್ದು" ಎಂದನು ಮುನಿ.

"ಒಳ್ಳೆಯದು. ಆಕೆ ನಮ್ಮ ರಕ್ಷಣೆಯಲ್ಲಿ ಸುರಕ್ಷಿತವಾಗಿದ್ದಾಳೆ. ಈಗಲೇ ಕರೆ ಕಳುಹಿಸುತ್ತೇನೆ" ಎಂದನು ಸೇನಾಧಿಪತಿ.

"ತಾವು ಅಪ್ಪಣೆ ಕೊಟ್ಟರೆ ನಾನೇ ಸ್ವತಃ ಹೋಗಿ, ನನ್ನ ತಾಯಿಗೆ ಈ ಶುಭವಾರ್ತೆಯನ್ನು ತಿಳಿಯಪಡಿಸುತ್ತೇನೆ" ಎಂದನು ಮಹೇಂದ್ರನಾಥ

ಉತ್ಸುಕತೆಯಿಂದ.

ರಾಜ ಸೇನಾಧಿಪತಿಯೊಂದಿಗೆ "ಉಗ್ರಸೇನಾ! ಮಹೇಂದ್ರನಾಥನಿಗೆ ಬೇಕಾದ ರಕ್ಷಣೆಯ ಏರ್ಪಾಡನ್ನು ಮಾಡಿಸು. ಈ ಕ್ಷಣದಿಂದ ಅವನೂ ಅವನ ತಾಯಿಯೂ ನಮ್ಮ ಅತಿಥಿಗಳು!'' ಎಂದನು.

"ಪ್ರಭೂ ಒಂದು ಮಾತು!'' ಎನ್ನುತ್ತಾ ರಾಣಿ ವಜ್ರೇಶ್ವರಿದೇವಿ ರಾಜನನ್ನು ಸಮೀಪಿಸಿ ಅವನ ಕಿವಿಯಲ್ಲಿ "ಸಾಹಸವೀರನಾದ ಮಹೇಂದ್ರನಾಥನು ನೋಡಲು ಅಂದವಾಗಿದ್ದಾನೆ. ನಮ್ಮ ಮಗಳಿಗೆ ತಕ್ಕ ವರನೆಂದು ಭಾವಿಸುತ್ತಿದ್ದೇನೆ'' ಎಂದಳು.

ಆ ಮಾತುಗಳನ್ನು ಕೇಳಿ ಅಲ್ಲಿದ್ದವರಿಗೆಲ್ಲಾ ಆನಂದವಾಯಿತು. ಮಹೇಂದ್ರನಾಥನು ಕಿರುನಗೆ ಬೀರುತ್ತಾ ಯುವರಾಣಿಯ ಕಡೆ ನೋಡಿದನು. ಆಕೆ ನಾಚಿಕೆಯಿಂದ ತಲೆ ತಗ್ಗಿಸಿದಳು.

"ಒಳ್ಳೆಯ ಕಾಲ ಬಂದಿದೆಯಲ್ಲವೇ? ಎಲ್ಲಾ ಒಳ್ಳೆಯದೇ ನಡೆಯುತ್ತದೆ ರಾಣಿ'' ಎನ್ನುತ್ತಾ ರಾಜ ಮುನಿಯ ಕಡೆ ತಿರುಗಿ "ಮಹೇಂದ್ರನಾಥನೂ, ಅವನ ತಾಯಿಯೂ ಇಲ್ಲಿಗೆ ಬರುವವರೆಗೆ ತಾವು ಇಲ್ಲೇ ಇರಬಹುದು!'' ಎಂದು ಹೇಳಿ ವಾಚಸ್ಪತಾಚಾರ್ಯರನ್ನು ನೋಡಿ "ಈಗ ಯುವರಾಣಿಯ ಗ್ರಹಸ್ಥಿತಿ ಹೇಗೆ ಇದೆಯೋ ಆಕೆಯ ಜಾತಕವನ್ನು ಪರೀಕ್ಷಿಸಿ ತಿಳಿಸಿ. ಬನ್ನಿ ಎಲ್ಲರೂ ಒಳಗಡೆಗೆ ಹೋಗಿ ಕುಳಿತು ಮಾತನಾಡಿಕೊಳ್ಳೋಣ!'' ಎಂದೆನ್ನುತ್ತಾ ರಾಜಭವನದೊಳಕ್ಕೆ ನಡೆದನು.

ರಾಜನ ಒಂದು ಬದಿಯಲ್ಲಿ ರಾಣಿ, ಯುವರಾಣಿ, ಆಕೆಯೊಂದಿಗೆ ಪರಿಚಾರಿಕೆ ಮಾಲಿನಿ ಮತ್ತೊಂದು ಬದಿಯಲ್ಲಿ ವಾಚಸ್ಪತಾಚಾರ್ಯರೂ ಮುನಿಯೂ ನಡೆದರು.

ಸೇನಾಧಿಪತಿ ಉಗ್ರಸೇನನು ಮಹೇಂದ್ರನಾಥನ ಭುಜವನ್ನು ತಟ್ಟಿ ಅಭಿನಂದಿಸುತ್ತಾ "ನಿಮ್ಮ ತಾಯಿಯನ್ನು ಕರೆದುಕೊಂಡು ಬರಲು, ನಿನ್ನೊಂದಿಗೆ ನಾನೂ ಬರುತ್ತೇನೆ. ನಿನ್ನಂತಹ ಸಾಹಸ ವೀರನನ್ನು ಹೆತ್ತ ಆ ತಾಯಿ ಧನ್ಯಳು! ಎಷ್ಟು ಕಷ್ಟಗಳು ಬಂದರೂ, ತನ್ನ ರಾಜವಂಶದ ಬಗ್ಗೆ ನಿನಗೆ ತಿಳಿಯಪಡಿಸದೆ ನಿನ್ನನ್ನು ಬೆಳೆಸಿದ ಆ ಮಹಾ ಸಾಧ್ವಿಯನ್ನು ನಾನೇ ಸ್ವತಃ ಬಂದು ಸಕಲ ಮರ್ಯಾದೆಗಳೊಂದಿಗೆ ಅರಮನೆಗೆ ಆಹ್ವಾನಿಸುತ್ತೇನೆ'' ಎನ್ನುತ್ತಾ ಭವನದ ಹೊರಗಡೆಗೆ ಬಂದನು.

ಅಲ್ಲಿ ಸಿದ್ಧವಾಗಿದ್ದ ಎರಡು ಕುದುರೆಗಳನ್ನು ಏರಿ ಕುಳಿತು ಇಬ್ಬರೂ ಮಹೇಂದ್ರನಾಥನ ತಾಯಿಯ ನಿವಾಸಸ್ಥಾನಕ್ಕೆ ಹೊರಟರು.

(ಮುಗಿಯಿತು)

